# ಈ ಪುಣ್ಯಕಾರ್ಯದಲ್ಲಿ ಪಾಲ್ಗೊಳ್ಳಿರಿ !

ಅನ್ನ ಮತ್ತು ಜ್ಞಾನ ದಾಸೋಹದ ಮಹಾ ಕೇಂದ್ರವಾಗಿ ಶ್ರೀ ಸಿದ್ಧಗಂಗಾ ಭಾರತದಲ್ಲೇ ಖ್ಯಾತಿ ಗಳಿಸಿ
ಶತಮಾನಗಳಿಂದ ನಡೆಸುತ್ತಿರುವ ಸೇವೆ ಎಲ್ಲರನ್ನು ಆಕರ್ಷಿಸಿದೆ, ಮೆಚ್ಚುಗೆ ಪಡೆದಿದೆ.

ತ್ರಿವಿಧ ದಾಸೋಹ ಕಾರ್ಯಗಳು ನಿರ್ವಿಘ್ನವಾಗಿ ನಡೆಯಲು
ಪೂಜ್ಯ ಸನ್ನಿಧಿಯವರು ಅಹರ್ನಿಶಿ ದುಡಿಯುತ್ತಿದ್ದಾರೆ.

ಈ ಮಹತ್ಕಾರ್ಯಕ್ಕೆ ಸಾರ್ವಜನಿಕರ ನೆರವೇ ಸಂಸ್ಥೆಯ ಮಹಾನಿಧಿ ಎಂದು ಶ್ರೀ ಶ್ರೀ ಗಳವರು ಹೇಳುತ್ತಿದ್ದಾರೆ. ನಾಡಿನ ಸಹಸ್ರ ಸಹಸ್ರ ಧರ್ಮಾಭಿಮಾನಿಗಳೇ ಶ್ರೀ ಕ್ಷೇತ್ರಕ್ಕೆ ಶ್ರೀರಕ್ಷೆ ಎಂದು ಭಾವಿಸಿದ್ದೇವೆ.

ಧನ ಸಹಾಯ :

— ಪ್ರತಿ ತಿಂಗಳು ಯಥಾ ಶಕ್ತಿ ನಿಮ್ಮ ಕಾಣಿಕೆ ಕಳುಹಿಸಿ.

ಕೂಡಿಟ್ಟು ಕಳುಹಿಸಿ :

— ಒಂದೇ ಬಾರಿಗೆ ದಾನ ನೀಡುವುದು ಹಲವರಿಗೆ ಕಷ್ಟ.
— ಹಾಗಿದ್ದಲ್ಲಿ ಶ್ರೀ ಕ್ಷೇತ್ರದ ಹುಂಡಿಯನ್ನು ನಿಮ್ಮ ಮನೆಯಲ್ಲಿಡಿ.
— ನಿತ್ಯ ಹಾಕಿ ಸಂಗ್ರಹಿಸಿ ವರ್ಷಕ್ಕೊಮ್ಮೆ ಶ್ರೀ ಮಠಕ್ಕೆ ಕಳುಹಿಸಿರಿ.

ಧಾನ್ಯ ಸಂಗ್ರಹಣೆ :

— ಪ್ರತಿ ವರ್ಷ ಸುಗ್ಗಿಯಲ್ಲಿ ಧಾನ್ಯವನ್ನು ಮುಡುಪಾಗಿಡಿ.
— ನೀವು ಬಂದಾಗ ಅರ್ಪಿಸಿ. ನಿಮ್ಮ ಕಾಳುಗಳು ರಾಶಿಯಾಗಿ ದಾಸೋಹಕ್ಕೆ ವಿನಿಯೋಗವಾಗಲಿ.

**ಸಹಸ್ರಾರು ಬಡಮಕ್ಕಳ ಆಶ್ರಯ ಕೇಂದ್ರ "ಸಿದ್ಧಗಂಗಾ".**
**ಇಲ್ಲಿಗೆ ನೀಡಿದ ಉದಾರ ಹೃದಯದ ನಿಮ್ಮ ದಾನ**
**ನಿತ್ಯ ದಾಸೋಹಕ್ಕೆ ವಿನಿಯೋಗವಾಗುತ್ತದೆ.**

ಹಣವನ್ನು ಕಳುಹಿಸುವವರು, ಎಂ. ಒ, ಚೆಕ್ ಅಥವಾ ಬ್ಯಾಂಕ್ ಡ್ರಾಫ್ಟನ್ನು

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲಾ–572131.

ಇವರಿಗೇ ನೇರವಾಗಿ ಕಳುಹಿಸಿ.

ಇತಿ, ಭಕ್ತಮಂಡಲಿ.

# 'ಸಿದ್ಧಗಂಗಾ'

ಜೂನ್, ೧೯೭೬

ಸಂಪುಟ–೧೨ ಸಂಚಿಕೆ–೬


ಮುಖ ಪುಟ

ಎರೆದ ನೀರಿನ ಋಣವ ಮರೆಯದಿದು ಕಲ್ಪತರು।
ಹರಿಸುವುದು ಮನುಜಂಗೆ ಅಮೃತದಂಥಎಳನೀರು॥


ಪ್ರಕಾಶಕರು
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ
ಹೆಚ್. ಬಿ. ಗಂಗಾಧರಯ್ಯ

ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಹಂಚಿಕೆಯ ವ್ಯವಸ್ಥಾಪಕರು
ಎಸ್. ಗಂಗರುದ್ರಪ್ಪ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ: 10 ರೂ
ಅಜೀವ ಸದಸ್ಯತ್ವ: 101 ರೂ




# ಶ್ರೀವಾಣಿ

ಸ್ವಾತಂತ್ರ್ಯ ಅರ್ಥವತ್ತಾಗಬೇಕಾದರೆ, ಶಕ್ತಿವತ್ತಾಗ ಬೇಕಾದರೆ ಜನರಲ್ಲಿರುವ ತಪ್ಪು ಕಲ್ಪನೆ ಭ್ರಮೆ ಹೋಗಬೇಕು. ಅವರ ಭ್ರಮೆ ಸ್ವಾತಂತ್ರ್ಯ ಕಾಮಧೇನು, ಕಲ್ಪವೃಕ್ಷವಾಗಿ ಸಕಲ ಇಷ್ಟಾರ್ಥಗಳನ್ನೀಯುವ ಶಕ್ತಿ ಸ್ವಾತಂತ್ರ್ಯಕ್ಕಿರಬೇಕೆಂಬುದು, ಇದು ಜನರ ತಪ್ಪು ಕಲ್ಪನೆ. ವಿದ್ಯಾರ್ಥಿಗಳು ಓದದೇ ರ್‍ಯಾಂಕು ಪಡೆಯಬೇಕು. ರೈತರು ಉತ್ತಮ ವ್ಯವಸಾಯಮಾಡದೆ ಹುಲುಸು ಬೆಳೆಯನ್ನು ಪಡೆಯಬೇಕು. ಬಿಸ್ತರು, ಕಾರ್ಮಿಕರು, ಬಂಡವಾಳಗಾರರು, ಅಧಿಕಾರಿಗಳು ಎಲ್ಲಾ ವರ್ಗದ ಜನರಿಗೂ ಕಷ್ಟ ಬೇಡ, ಬೆವರು ಸುರಿಸುವ ದುಡಿಮೆ ಬೇಡ, ಕರ್ತವ್ಯ ಬೇಡ, ಹಣ ಬೇಕು, ಫಲಬೇಕು, ಮೋಡಗಳಿಲ್ಲದೆ ಮಳೆ ಸುರಿಯಬೇಕು. ಈ ಕೀಳು ಮನೋಭಾವದ ಅಂಟುಜಾಡ್ಯ ತೊಲಗದ ಹೊರತು ಸ್ವಾತಂತ್ರ್ಯಕ್ಕೆ ಸಾರ್ಥಕತೆ ಇಲ್ಲ.

ನೆಲ ಸುಡುತ್ತದೆ, ತಲೆ ಕಾಯುತ್ತಿರುತ್ತದೆ, ಬೆವರು ಕಿತ್ತುಕೊಳ್ಳುತ್ತಿರುತ್ತದೆ, ಅಂಥ ಬಿಸಿಲಿನಲ್ಲಿ ಯಾವ ಪರಿವೆ ಇಲ್ಲದೆ ನಿರಾತಂಕವಾಗಿ ಎಲ್ಲರನ್ನೂ ಮರೆತು ಮಕ್ಕಳು ಚಿನ್ನಿ ದಾಂಡು, ಚೆಂಡಾಟ, ಕುರಿ, ತೋಳ, ಕಬಡಿ ಮುಂತಾದ ಆಟಗಳನ್ನು ಹಸಿವಿನ ಗಮನವಿಲ್ಲದೆ ಆಡುತ್ತಿರುತ್ತವೆ. ನೀರಡಿಕೆಯನ್ನು ಲೆಕ್ಕಿಸುವುದಿಲ್ಲ. ಆಟದಲ್ಲಿ ಮನೆ ಮಠಗಳನ್ನು ಮರೆತು ತಾವೇ ತಾವಾಗಿ ಬಿಡುತ್ತವೆ. ಮಕ್ಕಳಿಗೆ ಆಟ ಆನಂದ ಆಡುವಾಗ ಬಿದ್ದು ತಲೆ ಮಂಡಿ ಒಡೆದು ರಕ್ತ ಸುರಿದರೂ, ತಂದೆ ತಾಯಿಗಳು ಬಂದು ಬೆನ್ನ ಮೇಲೆ ಬಿಗಿದು ಬೈದರೂ ಲೆಕ್ಕಿಸುವುದಿಲ್ಲ. ನಗುತ್ತಲೇ ಆಟವಾಡುತ್ತಿರುತ್ತವೆ. ಮಕ್ಕಳಿಗೆ ಆಟ ಆನಂದವರ್ಧಕ, ಶಕ್ತಿವರ್ಧಕ. ಹೀಗೆಯೇ ದೊಡ್ಡವರಿಗೂ ಅವರು ಮಾಡುವ ಕಾರ್ಯಗಳು ಆನಂದ ಕೊಡಬೇಕು, ಶಕ್ತಿಯನ್ನ ನೀಡಬೇಕು. ಮನಸ್ಸನ್ನು ಉಲ್ಲಾಸಗೊಳಿಸಬೇಕು. ಆಗ ಅಂಥ ಸೃಷ್ಟಾತ್ಮಕ ಕಾರ್ಯ 'ಕಾಯಕವೇ ಕೈಲಾಸ' ಎಂಬ ಘಟ್ಟಕ್ಕೆ ಬಂದು ನಿಲ್ಲುತ್ತದೆ. ಯಾವ ಸಮಾಜದ ಮಧ್ಯೆ ವ್ಯಕ್ತಿ ಬೆಳೆಯುತ್ತಾನೆಯೋ ಅಂತಹ ಸಮಾಜ ಹಸನಾಗಿರಬೇಕು, ವ್ಯಕ್ತಿಯೂ ಚೆನ್ನಾಗಿರಬೇಕು, ಹಸನಾಗಿರಬೇಕು. ಎರಡರಲ್ಲಿ ಯಾವುದಾದರೊಂದು ಹಸನಾಗದಿದ್ದರೂ ಪ್ರಗತಿ ಕುಂಟಿತವಾಗುತ್ತದೆ.

—

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಮಾಸ ಪತ್ರಿಕೆಯು ಲೇಖಕರಿಂದ ವಿಚಾರ ಪ್ರಚೋದಕವಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಧರ್ಮ, ಸಂಸ್ಕೃತಿ, ಸಾಮಾಜಿಕ, ಐತಿಹಾಸಿಕ ಹಾಗೂ ಸ್ಥಳ ಮಹಾತ್ಮೆಗಳಿಗೆ ಸಂಬಂಧಿಸಿದವುಗಳಾದರೆ ಹೆಚ್ಚು ಆದ್ಯತೆ ನೀಡಲಾಗುವುದು. ಪ್ರಚಲಿತ ಸಾಮಾಜಿಕ ಜೀವನದ ಸಮಸ್ಯೆಗಳನ್ನು ಬಿಂಬಿಸುವ ಹಾಗೂ ಅವುಗಳಿಗೆ ಪರಿಹಾರ ಸೂಚಿಸುವ ಸಣ್ಣಕಥೆ, ಕವನ ಮತ್ತು ಪ್ರಬಂಧಗಳಿಗೂ ಸ್ವಾಗತವುಂಟು. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿರಬೇಕು. ಸ್ವೀಕೃತವಾದ ಲೇಖನಗಳಿಗೆ "ಸಿದ್ಧಗಂಗಾ" ಆಗಿಂದಾಗ್ಗೆ ನಿಗದಿ ಮಾಡಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು ಸ್ಫುಟವಾಗಿ ಕಾಗದದ ಒಂದೇ ಮಗ್ಗುಲಲ್ಲಿ ಬರೆದು "ಸಂಪಾದಕರು"

'ಸಿದ್ಧಗಂಗಾ' [ಕನ್ನಡ ಮಾಸಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ -572131
ತುಮಕೂರು ಜಿಲ್ಲೆ

ಇವರಿಗೆ ಕಳುಹಿಸಿಕೊಡಬೇಕಾಗಿ ವಿನಂತಿ.

## ಪರಿವಿಡಿ


* ಸ್ಥಿರ ಶೀರ್ಷಿಕೆಗಳು :

❁ ಶ್ರೀವಾಣಿ 3
❁ ಮಣ್ಣಿನ ಮಕ್ಕಳ ಯೋಜನ ಸರಣಿ 16

* ವಿಶೇಷ ಲೇಖನಗಳು :

❁ ಪ್ರಾರ್ಥನೆಯ ಮಹತ್ವ 19
❁ ಧರ್ಮಕೇಂದ್ರಗಳ ಪಾತ್ರ 21

* ಸಾಹಿತ್ಯಕ :

❁ ಭರ್ತೃಹರಿಯ ಜೀವನ ದೃಷ್ಟಿ 5
❁ ರಾಮಚರಿತ ಮಾನಸದ ಧಾರ್ಮಿಕ ನೆಲೆ 9
❁ ಮಕ್ಕಳಿಗಾಗಿ ಸಾಹಿತ್ಯ 13

* ಶರಣರ ಕತೆಗಳು :

❁ ಶಿವಶರಣ ಏಲೇಶ್ವರ ಕೇತಯ್ಯ 7

* ಕೃಷಿ—ವಿಜ್ಞಾನ :

❁ ನಮ್ಮ ರೈತ ಅಂದು–ಇಂದು 23
(ಹಿಂದಿನ ಸಂಚಿಕೆಯಿಂದ)
❁ ಗ್ರಹಣವೋ ಸೂರ್ಯಾಪಹರಣವೋ? 17

* ಕಾವ್ಯವಾಹಿನಿ :

❁ ಯುಗಮಂತ್ರ 15

* ನಿಮ್ಮ ಭವಿಷ್ಯ : 26


## ಶ್ರದ್ಧಾಂಜಲಿ

ಇತ್ತೀಚೆಗೆ ಮೇ ಮಾಹೆಯಲ್ಲಿ, ಉತ್ತರ ಕೊಡಗು ಜಿಲ್ಲೆ, ಕಿರಿಕೊಡ್ಲಿ ಮಠಾಧ್ಯಕ್ಷರಾಗಿದ್ದ ಶ್ರೀ. ಮ. ನಿ. ಪ್ರ. ಸ್ವ. ಶ್ರೀ ಶ್ರೀ ಗುರುಸಿದ್ಧಸ್ವಾಮಿಗಳವರು ಹಾಗೂ ಮೈಸೂರಿನಲ್ಲಿದ್ದ ರಿಟೈರ್ಡ್ ಅಸಿಸ್ಟೆಂಟ್ ಕಮೀಷನರ್ ಶ್ರೀ ಓ. ಎಸ್. ಲಿಂಗಣ್ಣಯ್ಯ ಇವರುಗಳು ಲಿಂಗೈಕ್ಯರಾದ ವಾರ್ತೆಯನ್ನು ತಿಳಿಸಲು ತುಂಬಾ ವಿಷಾದಿಸುತ್ತೇವೆ. ಉಭಯತ್ರರೂ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳಾಗಿದ್ದರು. 2–6–76 ರಂದು ಶ್ರೀ ಕ್ಷೇತ್ರದಲ್ಲಿ ಸೇರಿದ್ದ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯಕಾರೀ ಸಮಿತಿಯು ದಿವಂಗತರಿಗೆ ತನ್ನ ಶ್ರದ್ಧಾಂಜಲಿಯನ್ನು ಸಮರ್ಪಿಸಿತು. 'ಸಿದ್ಧಗಂಗಾ' ಮಾಸಪತ್ರಿಕೆಯು ತನ್ನ ಸಂತಾಪವನ್ನು ಸೂಚಿಸಿ ಈ ಮೂಲಕ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

# ಭರ್ತೃಹರಿಯ

# ಜೀವನ ದೃಷ್ಟಿ

—ಹೆಚ್. ಜಿ. ಲೋಕೂರ

ಭರ್ತೃಹರಿಯ ಬಗ್ಗೆ ನಮಗೆ ತಿಳಿದ ಐತಿಹಾಸಿಕ ವಿವರ ಅಲ್ಪವಾದರೂ, ಅವನ ಶೃಂಗಾರ-ವೈರಾಗ್ಯ-ನೀತಿಶತಕಗಳಲ್ಲಿನ ಕೆಲವು ಪದಗಳು ಮಾತ್ರ ಸಂಸಾರವನ್ನು ದಾಟಿ ನಿಂತ ಸಿದ್ಧ ಕವಿಯ ಉನ್ನತ ನಿಲುವನ್ನು ನಿಚ್ಚಳಗೊಳಿಸುತ್ತಾನೆ; ಅವನ ಕೈಯಲ್ಲಿನ ರಾಗ ವಿರಾಗಳ ತಕ್ಕಡಿ ಎತ್ತ ಬಾಗಿ ತೂಗುತ್ತಿದೆ ಎಂಬುದನ್ನು ತೆರೆದು ತೋರುತ್ತವೆ. ಶೃಂಗಾರ ಶತಕದಲ್ಲಿ ರಾಗಪೂರ್ಣವಾದ ಕೆಲ ಪದ್ಯಗಳಿದ್ದರೂ ಕವಿ ವೈರಾಗ್ಯ ಬೋಧನೆಯನ್ನು ಮರೆತಿಲ್ಲ. ನೀತಿಶತಕವಂತೂ ಒಳ್ಳೆಯ ಬಾಳುವೆಯನ್ನೇ ಬೋಧಿಸುತ್ತದೆ. ಕವಿಯ ಅನುಭವಗಳ ಫಲವಾದ ವೈರಾಗ್ಯಶತಕವು ಬಾಹ್ಯಜೀವನದ ಅಸಾರವನ್ನು ಸಾರುತ್ತದೆ ಹೀಗೆ ಶೃಂಗಾರಶತಕದ ಕವಿ ರಸಿಕದೃಷ್ಟಿಯುಳ್ಳವನಾದರೂ ಅವನಲ್ಲಿ ತತ್ವಜ್ಞಾನಿಯ ಶಾಂತಮನೋಭಾವವಿರುವುದು ವೈರಾಗ್ಯ-ನೀತಿಶತಕಗಳಲ್ಲಿ ಸ್ಪಷ್ಟವಾಗಿದೆ.

ಅಂತೆಯೇ ನೀರೆಯರು ಮನೋಹರೆಯರಾಗಿ, ಭೌತಿಕ ವಿಭೂತಿ ಸೊಗಸು ಎನಿಸಿದರೂ, 'ಮತ್ತಾಂಗನಾಪಾಂಗಭಂಗಲೋಲಂ ಹಿ ಜೀವಿತಂ' (ಮದಿರಾಕ್ಷಿಯರ ನೋಟದಂತೆ ಜೀವನವೂ ನಶ್ವರ) ಎಂಬಂತಹ ಅನುಭವದ ಪರಮ ಸತ್ಯವನ್ನು ಭರ್ತೃಹರಿ ಒಪ್ಪಿಕೊಂಡಿದ್ದಾನೆ, ಕ್ಷಣಭಂಗುರವಾದ ಇಂತಹ ಜೀವನದಲ್ಲಿ ಏನು ಮಾಡಬೇಕೆಂಬುದೇ ಒಮ್ಮೊಮ್ಮೆ ತಿಳಿಯುವುದಿಲ್ಲ.

ತಪಸ್ಯಂತಃ ಸಂತಃ ಕಿಮಧಿನಿವಸಾಮಃ ಸುರನದೀಂ
ಗುಣೋದಾರಾನ್ ದಾರಾನುತ ಪರಿಚರಾಮಃ ಸವಿನಯಂ।
ಪಿಬಾಮಃ ಶಾಸ್ತ್ರೌಘಾನುತ ವಿವಿಧ ಕಾವ್ಯಾಮೃತ ರಸಾನ್
ನ ವಿದ್ಮಃ ಕಿಂ ಕುರ್ಮಃ ಕತಿಪಯ ನಿಮೇಷಾಯುಷಿ ಜನೇ ॥

ತಪೋಯೋಗಿಯಾಗಿ ಗಂಗಾತೀರದಲ್ಲಿ ಇರೋಣವೋ, ಗುಣವಂತ ಸತಿಯರನ್ನು ಅನುನಯದಿಂದ ಸೇವಿಸೋಣವೋ, ಶಾಸ್ತ್ರಗಳನ್ನು ಹೀರೋಣವೋ ಕಾವ್ಯರಸವನ್ನು ಕುಡಿಯೋಣವೋ— ಕೆಲವು ಕ್ಷಣಗಳ ಬಾಳಿನಲ್ಲಿ ಏನು ಮಾಡಬೇಕೆಂದರಿಯೆವು. ಅದರಿಂದ ರಾಜಭೋಗದ ಭಾಗ್ಯವಿದ್ದರೆ ಉಣಬೇಕು, ಇಲ್ಲವಾದರೆ ಸರ್ವಸಂಗಪರಿತ್ಯಾಗಿಯಾಗಿ ನಿರ್ವಿಕಲ್ಪ ಸಮಾಧಿಗೇರಬೇಕು:

ಅಗ್ರೇ ಗೀತಂ ಸರಸ ಕವಯಃ ಪಾರ್ಶ್ವಯೋರ್ದಾಕ್ಷಿಣಾತ್ಯಾಃ
ಪಶ್ಚಾಲ್ಲೀಲಾವಲಯರಣಿತಂ ಚಾಮರಗ್ರಾಹಿಣೀನಾಂ।
ಯದ್ಯಸ್ತ್ಯೇವಂ ಕುರುಭವರಸಾಸ್ವಾದನೇ ಲಂಪಟತ್ವಂ
ನೋಚೇಚ್ಚೇತಃ ಪ್ರವಿಶ ಸಹಸಾ ನಿರ್ವಿಕಲ್ಪೇ ಸಮಾಧೌ॥

ಮುಂದೆ ಸಂಗೀತಗಾರರು, ಪಕ್ಕದಲ್ಲಿ ದಕ್ಷಿಣದೇಶದ ಸುಕವಿಗಳು, ಬೆನ್ನಡೆಯಲ್ಲಿ ಚಾಮರವಿಕ್ಕುವರ ಬಳೆಗಳ ಬೆಡಗಿನುಲಿ-ಹೀಗಿದ್ದರೆ ಆಸಕ್ತಿಯಿಂದ ಸಂಸಾರವನ್ನು ಸವಿಯುತ್ತಿರು; ಇಲ್ಲವಾದರೆ ಎಲೆ ಮನಸೇ ನಿರ್ವಿಕಲ್ಪ ಸಮಾಧಿಯನ್ನು ನೀನು ಹೊಂದು.

ಹೀಗೆಹೇಳಿಕೊಂಡರೂ ಸಂಸಾರದ ಮಾಯೆ ಇನ್ನೂ ಬಲವತ್ತರವಾದುದಲ್ಲವೇ? ಹುಟ್ಟಿದವ ಸಾಯಲೇಬೇಕಾದರೂ ನಮ್ಮ ಜೀವನದ ರೀತಿ ಏನು ?

ವ್ಯಾಘ್ರೀವ ತಿಷ್ಠತಿ ಜರಾ ಪರಿತರ್ಜಯಂತೀ
ರೋಗಾಶ್ಚ ಶತ್ರವ ಇವ ಪ್ರಹರಂತಿ ದೇಹಂ।
ಆಯುಃ ಪರಿಸ್ರವತಿ ಭಿನ್ನ ಘಟಾದಿವಾಂಭೋ
ಲೋಕಸ್ತಥಾಪ್ಯಹಿತಮಾಚರತೀತಿ ಚಿತ್ರಂ ॥

ಹೆಬ್ಬುಲಿಯಂತೆ ಮುಪ್ಪು ಹೆದರಿಸುತ್ತ ನಿಂತಿದೆ, ಶತ್ರುಗಳಂತೆ ರೋಗಗಳು ನಮ್ಮ ದೇಹವನ್ನು ಸದೆಬಡಿವುವು, ಒಡೆದ ಮಡಿಕೆಯ ನೀರಿನಂತೆ ಆಯುಷ್ಯ ಸೋರಿ ಹೋಗುತ್ತಿದೆ; ಆದರೂ ಜನರು ಅಹಿತ ಕಾರ್ಯಗಳಲ್ಲಿ ತೊಡಗಿರುವುದಚ್ಚರಿಯಲ್ಲವೇ ? ಜೊತೆಗೆ ವಿಷಾದವೂ ಎನಿಸುತ್ತದೆ:

ನಿವೃತ್ತಾ ಭೋಗೇಚ್ಛಾ ಪುರುಷ ಬಹುಮಾನೋ
ವಿಗಲಿತಃ
ಸಮಾನಾಃ ಸ್ವರ್ಯಾತಾಃ ಸಪದಿ ಸುಹೃದೋ
ಜೀವಿತಸಮಾಃ
ಶನೈರ್ಯಷ್ಟ್ಯುತ್ಥಾನಂ ಘನತಿಮಿರರುದ್ಧೆ ಚ
ನಯನೇ
ಅಹೋ ಧೃಷ್ಟಃ ಕಾಯಸ್ತದಪಿ ಮರಣಾಪಾಯ
ಚಕಿತಃ ॥

ಭೋಗದಾಸೆ ಮುಗಿಯಿತು, ಪುರುಷ ಸಮಾಜದ ಗೌರವ ತೀರಿತು, ಪ್ರಾಣ ಸಮಾನರಾದ ಓರಗೆಯ ಸ್ನೇಹಿತರು ಸ್ವರ್ಗಕ್ಕೆ ಹೋದರು, ಕೋಲನೂಂ ಕೊಂಡು ಮೆಲ್ಲನೇಳಬೇಕಾಗಿದೆ, ಕಣ್ಗಳಿಗೆ ಕತ್ತಲೆ ಆವರಿಸುತ್ತಿದೆ; ಆದರೂ ಮೊಂಡು ದೇಹವಿದಿನ್ನೂ ಮರಣಕ್ಕೆ ಅಳುಕುತ್ತಿದೆ!

ಈ ಜೀವನ ನಾಟಕದ ದೃಶ್ಯಗಳ ಸಾರವನ್ನು ಪರಿಕ್ಷಿಸಿ :

ಕ್ಷಣಂ ಬಾಲೋ ಭೂತ್ವಾ ಕ್ಷಣಮಪಿ ಯುವಾ
ಕಾಮರಸಿಕಃ
ಕ್ಷಣಂ ವಿತ್ತೈರ್ಹೀನಃ ಕ್ಷಣಮಪಿಚ ಸಂಪೂರ್ಣ
ವಿಭವಃ ।
ಜರಾಜೀರ್ಣೈರಂಗೈಃ ನಟ ಇವ ವಲೀಮಂಡಿತತನುಃ
ನರಃ ಸಂಸಾರಾಂತೇ ವಿಶತಿ ಯಮಧಾನೀ
ಯವನಿಕಾಂ ॥

ಒಂದುಗಳಿಗೆ ಮಗುವಾಗಿ, ಒಂದುಗಳಿಗೆ ಕಾಮುಕ ತರುಣನಾಗಿ, ಒಮ್ಮೆ ಬಡವನಾಗಿ, ಒಮ್ಮೆ ಸಿರಿವಂತ ನಾಗಿ, ಮುಪ್ಪಡರಿ ಸುಕ್ಕಡಸಿದಂಗದಿಂದ ನಟನಂತೆ ಮನುಜನಿವ ಸಂಸಾರ ಮುಗಿಯಲು ಯಮಪುರದ ತೆರೆಯ ಮರೆಯನ್ನು ಸೇರುವನು ? ಇಂಥ ಜೀವನ ಲೀಲೆಯನ್ನು ಪಗಡೆಯಾಟಕ್ಕೆ ಹೋಲಿಸಿ ಭರ್ತೃಹರಿ ಕೊಡುವ ಇನ್ನೊಂದು ಭೂಮ ಚಿತ್ರವಿದು:

ಯತ್ರಾನೇಕಃ ಕ್ವಚಿದಪಿಗೃಹೇ ತತ್ರ ತಿಷ್ಠ-
ತ್ಯಥೈಕೋ
ಯತ್ರಾ‌ಪ್ಯೇಕಸ್ತದನು ಬಹವಃ ತತ್ರ ನೈಕೋಪಿ
ಚಾಂತೇ ।
ಇತ್ಥಂ ನೇಯೌ ರಜನಿದಿವಸೌ ಲೋಲಯನ್
ದ್ವಾವಿವಾಕ್ಷೌ
ಕಾಲಃ ಕಾಲ್ಯಾ ಭುವನಫಲಕೇ ಕ್ರೀಡತಿ ಪ್ರಾಣಿ
ಶಾರೈಃ ॥

ಪಲವು ಜನ ಇರುವ ಮನೆಯಲ್ಲಿ ಆ ಮೇಲೆ ಒಂಟಿಯಾಗಿರುವುದು– ಹಲವರಿರುವುದು, ಮುಂದೆ ಆ ಮನೆ ಬರಿದಾಗುವುದು—ಹೀಗೆ ನಡೆಸುವ ಹಗಲಿರುಳೆಂಬ ಎರಡು ದಾಳ ಹಾಕುತ್ತ ಕಾಲನು ಕಾಳಿಯೊಡನೆ ಆಡುವಲ್ಲಿ, ಭುವನವೇ ಪಟ ಪ್ರಾಣಿಗಳೇ ಪಗಡೆ.

ಇಂತಹ ಭವ್ಯದರ್ಶನದ ಕವಿಗೆ ಬ್ರಹ್ಮಜ್ಞಾನ ಒದಗಿದ್ದು ಅಚ್ಚರಿಯಲ್ಲ:

ಯದಾಸೀದ ಜ್ಞಾನಂ ಸ್ಮರತಿಮಿರಸಂಚಾರ ಜನಿತಂ
ತದಾ ದೃಷ್ಟಂ ನಾರೀಮಯ ಮಿದಮಶೇಷಂ ಜಗದಿತಿ।
ಇದಾನೀಮಸ್ಮಾಕಂ ಪಟುತರ ವಿವೇಕಾಂಜನಾಂ
ಸಮೀಭೂತಾ ದೃಷ್ಟಿಃ ತ್ರಿಭುವನಮಪಿ ಬ್ರಹ್ಮಮ-
ನುತೇ॥

ಕಾಮದಮಬ್ಬು ಹಬ್ಬಿರುವಾಗ ಇದ್ದ ಅಜ್ಞತೆಯಿಂದ ಜಗತ್ತೆಲ್ಲವೂ ನಾರೀ ಮಯವೆಂದು ತೋರಿತು; ಆದರೆ ವಿವೇಕದ ಕಾಡಿಗೆ ಹಚ್ಚಿ ಹದಗೊಂಡ ಕಣ್ಗಳಿಂದು ಪ್ರಜ್ಞೆಪಡೆದು ಮೂಜಗವನ್ನೂ ಬ್ರಹ್ಮವೆಂದೆ ಬಗೆಯುತ್ತಿವೆ. ಈ ನೆಲೆಗೇರಿದ ಭರ್ತೃಹರಿಯ ಪ್ರಾರ್ಥನಾ ಪದ್ಯಗಳಿವು :

ದಿಕ್ಕಾಲಾದ್ಯನವಚ್ಛಿನ್ನಾನಂತ ಚಿನ್ಮಾತ್ರ ಮೂರ್ತಯೇ
ಸ್ವಾನು ಭೂತ್ಯೇಕಮಾನಾಯ ನಮಃ ಶಾಂತಾಯ
ತೇಜಸೇ।

ದಿಕ್ಕು ಕಾಲಾದಿಗಳನ್ನು ಮೀರಿ, ಅಂತವಿಲ್ಲದ ಚಿನ್ಮೂರ್ತಿಯಾಗಿ, ಸ್ವಾನುಭವ ಒಂದೇ ತನಗೆ ಅಳತೆಗೋಲಾಗಿರುವ ಜ್ಯೋತಿಗೆ ನಮಸ್ಕಾರಗಳು.

ಮಾತರ್ಮೇದಿನಿ ತಾತ ಮಾರುತ ಸಖೇ ತೇಜಃ
ಸುಬಂಧೋ ಜಲ
ಭ್ರಾತರ್ವ್ಯೋಮ ನಿಬದ್ಧ ಏಷ ಭವತಾಮಂತ್ಯಃ
ಪ್ರಣಾಮಾಂಜಲಿಃ।
ಯುಷ್ಮತ್ಸಂಗವಶೋಪಜಾತಸುಕೃತಸ್ಫಾರಸ್ಫುರನ್ನಿ-
ರ್ಮಲಜ್ಞಾನಾಪಾಸ್ತ ಸಮಸ್ತ ಮೋಹಮಹಿಮಾ
ಲಿಯೇ ಪರಬ್ರಹ್ಮಣಿ॥

ತಾಯೆ ಭೂಮಿ, ತಂದೆ ಮಾರುತ, ಗೆಳೆಯ ತೇಜಸ್ಸು, ಬಂಧು ಸಲಿಲವೇ, ಅಣ್ಣ ಆಕಾಶ, ನಿಮಗೆಲ್ಲ ಕೊನೆಯ ಸಲಾಕೈಮುಗಿದೆನೊ; ನಿಮ್ಮ ಸಹವಾಸಪುಣ್ಯದಿಂದುಂಟಾದ ಧರ್ಮಲ ಜ್ಞಾನದಿಂದ ಮೋಹಮಹಿಮೆಯೆಲ್ಲ ಅಳಿದು ಪರಬ್ರಹ್ಮದಲ್ಲಡಗುತ್ತಿದ್ದೇನೆ. ಇದೀಗ ಸಿದ್ಧಪುರುಷನ ಜೀವನ ದೃಷ್ಟಿ. —

# ಶಿವಶರಣ ಏಲೇಶ್ವರ ಕೇತಯ್ಯ

—ಎಸ್. ಎಸ್. ಭೂಸರಡ್ಡಿ

ಆತ ಅಂಗವ ತೊಟ್ಟಡೇನು. ಪರಾಂಗನೆಯ ಸೋಂಕ
ಕರವಿದ್ದರೇನು, ಮತ್ತೊಂದನಪಹರಿಸಿ ಕೆಗೆಯ
ಕರ್ಣವಿದ್ದಡೇನು, ಮತ್ತೊಂದು ಅನ್ಯಶಬ್ದವಕೇಳ
ಕಂಗಳಿದ್ದಡೇನು, ಲಿಂಗವಲ್ಲದುದ ನೋಡ
ನಾಸಿಕವಿದ್ದಡೇನು, ಅರ್ಪಿತವಲ್ಲದುದ ವಾಸಿಸ
ಜಿಹ್ವೆಯಿದಡ್ದೇನು, ಪ್ರಸಾದವಲ್ಲದುದ ಸ್ವೀಕರಿಸ
ಇಂತೀ ಇಲ್ಲದವರಲ್ಲಿ ಸರ್ವವ್ಯವಧಾನಿಯಾಗಿ
ನಡೆ–ನುಡಿ, ಅರಿವು ಶುದ್ಧಾತ್ಮನು !
ಏಲೇಶ್ವರ ಲಿಂಗವು ತಾನೆ.

ವೀರಶೈವ ಸಂಸ್ಕೃತಿಯ ಲಕ್ಷಣಗಳನ್ನು ಎಳೆ ಎಳೆಯಾಗಿ ಬಿಡಿಸಿದ ಶರಣರಲ್ಲಿ ಏಲೇಶ್ವರ ಕೇತಯ್ಯನು ಒಬ್ಬ ಶ್ರೇಷ್ಠ ಅನುಭವಿ; ಶಿವಾನುಭಾವಿ, ಮೇಲಣ ವಚನಗಳಲ್ಲಿ ನಮ್ಮ ಪಂಚೇಂದ್ರಿಯಗಳು ನಿರ್ವಹಿಸಬೇಕಾದ ಆದ್ಯ ಕರ್ಮಗಳನ್ನು ವೀರಶೈವ ಪರಿಪಡಿಯಲ್ಲಿ ಅದೆಷ್ಟು ಸುಲಭವಾಗಿ, ಸರಳವಾಗಿ ತಿಳಿಸಿದ್ದಾನೆ. ಶರಣರ ಸಂದೇಶವನ್ನು ಮನಮುಟ್ಟುವಂತೆ ತನ್ನ ವಚನಗಳಲ್ಲಿ ಸಾರಿದ ಏಲೇಶ್ವರ ಕೇತಯ್ಯನ ಪುಣ್ಯ ಜೀವನವನ್ನು ಕನ್ನಡಿಗರು ಅವಶ್ಯವಾಗಿ ತಿಳಿದುಕೊಳ್ಳಲೇಬೇಕು.

ಕರ್ನಾಟಕ ಮಾತೆಯ ಸೀಮಂತ ಮಣಿಯಂತೆ ಶೋಭಿಸುವ ಜಿಲ್ಲೆ ಕಲಬುರ್ಗಿ. ಈ ಜಿಲ್ಲೆಯ ಒಂದು ಪುಟ್ಟಗ್ರಾಮ ಏಲೇಶ್ವರ. ಈಗ ಈ ಗ್ರಾಮವನ್ನು ಏಲೇರಿಯೆಂದು ಕರೆಯುತ್ತಾರೆ. ಹದಿಮೂರನೆಯ ಶತಮಾನದಲ್ಲಿ ಸುಮಾರು 1250 ಅದು ಭೂಲೋಕದ ಕೈಲಾಸದಂತೆ ಶೋಭಿಸುತ್ತಿತ್ತು. ಅದು ಮಹಾ ಶರಣ ಕೇತಯ್ಯನ ಪಾದ ಧೂಳಿಯಿಂದ ಪಾವನವಾಗಿತ್ತು. ಶರಣರ ಉಕ್ತಿಗಳಲ್ಲ; ಸೂಕ್ತಿಗಳಲ್ಲಿ ಅಪಾರ ನಿಷ್ಠೆ, ಶ್ರದ್ಧೆ, ವಿಶ್ವಾಸ ಉಳ್ಳವನಾಗಿತ್ತು. ಅವುಗಳಲ್ಲಿ ಅತ್ಯಂತ ಭಕ್ತಿ ಭಾವಗಳನ್ನು ಇಟ್ಟುಕೊಂಡಿದ್ದ. ಅದರಂತೆ ಆಚರಿಸುತ್ತಿದ್ದ. ಆತನ ಸತಿ ಸಾಯಿದೇವಿ; ಮಹಾಪತಿವ್ರತೆ. ಗಂಡನನ್ನು ನೆರಳಿನಂತೆ ಹಿಂಬಾಲಿಸುತ್ತಿದ್ದ ಸತಿ ಶಿರೋಮಣಿ. ಈ ಪುಣ್ಯದಂಪತಿಗಳಿಗೆ ಶಿವಣ್ಣ–ಶಿವಕ್ಕರೆಂಬ ಮುದ್ದಾದ ಇಬ್ಬರು ಮಕ್ಕಳು ಅವರ ಬಾಳಿನ ಎರಡು ಕಣ್ಣಾಗಿದ್ದರು. ಅವರು ಒಕ್ಕಲತನ ವ್ಯವಸಾಯದಲ್ಲಿ ನಿರತರು: ಲಿಂಗಾರ್ಪಿತವಾಗದೆ ಆತನ ಮನೆಯ ದನಕರುಗಳೂ ಸಹ ಒಂದು ಹುಲ್ಲುಕಡ್ಡಿಯನ್ನೂ ಮುಟ್ಟುತ್ತಿರಲಿಲ್ಲ. ಇಷ್ಟೇ ಏಕೆ ಆ ಮಹಾಮನೆಯ ಬೆಕ್ಕು-ಇಲಿ-ನೊಣಗಳೂ ಸಹ ಈ ನಿಯಮವನ್ನು ಪಾಲಿಸುತ್ತಿದ್ದವು. ವೀರಶೈವ ನಿಷ್ಠೆ ಚೆನ್ನಾಗಿ ಆ ದಂಪತಿಗಳಲ್ಲಿ ಸಾಕಾರಗೊಂಡಿತ್ತು. ಶಿವಾನುಭವದ ಗೂಢಾರ್ಥವನ್ನು ಕರಗತಮಾಡಿಕೊಂಡ ದಿವ್ಯ ಚೇತನಗಳು ಆ ದಂಪತಿಗಳು.

ಊರಿನ ಕಿಡಿಗೇಡಿಗಳನೇಕರಿಗೆ ಕೇತಯ್ಯನ ಲಿಂಗನಿಷ್ಠೆ ಸೇರದಾಯಿತು. ಈತನನ್ನು ಊರು ಬಿಡಿಸಬೇಕೆಂಬ ದುಷ್ಟಬುದ್ಧಿ ಅವರಿಗೆ ಬಂತು. ಸಮಯ ಸಾಧಿಸಿ ಆತನು ಬಿತ್ತುವ ಬೀಜಗಳನ್ನೇ ಸುಟ್ಟರು. ಶರಣ ಕೇತಯ್ಯ ಇದಕ್ಕಾಗಿ ಎಳ್ಳಷ್ಟೂ ವ್ಯಥೆಪಡಲಿಲ್ಲ. ನಿಶ್ಚಿಂತನಾಗಿ ಸುಟ್ಟಬೀಜಗಳನ್ನೇ ಬಿತ್ತಿದ; ಹುಲುಸಾದ ಬೆಳೆ ಬೆಳೆದ. ವೈರಿಗಳು ಇನ್ನಷ್ಟು ಕಿಡಿ ಕಿಡಿಯಾದರು; ಅವರ ರೋಷ ಹೆಚ್ಚಿತು; ದ್ವೇಷಬಲಿಯಿತು ಅಸೂಯೆಯಿಂದ ದಗ್ಧರಾದ ಅವರು ಮತ್ತೊಮ್ಮೆ ಆತನ ದನಕರುಗಳನ್ನೇ ಕಳವು ಮಾಡಿಬಿಟ್ಟರು ಆದರೆ- ವಿಚಿತ್ರವೆಂದರೆ ಆ ದನಕರುಗಳು ಒಂದು ವಾರ

ಕಳೆದರೂ ಅವರಮನೆಗಳಲ್ಲಿ ಹುಲ್ಲು— ಮೇವುಗಳನ್ನು ಮುಟ್ಟಲಿಲ್ಲ. ಕಳ್ಳರಿಗೆ ಬುದ್ಧಿ ಬಂದು ದನಕರುಗಳನ್ನು ಬಿಟ್ಟು ಬಿಟ್ಟರು. ಶರಣರ ಮನೆಯ ಲಿಂಗಾರ್ಪಿತವಾದ ಹುಲ್ಲನ್ನು ಮನಸಾರೆ ತಿಂದವು, ನೀರು ಕುಡಿದವು. ವೈರಿತಂಡಕ್ಕೆ ಇಷ್ಟಕ್ಕೂ ಸಮಾಧಾನವಾಗಲಿಲ್ಲ. ಅವರು ಮತ್ತಷ್ಟು ಕೆರಳಿದವರಾದರು. ಸುತ್ತಲೂ ಈ ಬಗೆಯ ದ್ರೋಹಿಗಳೇ ತುಂಬಿಕೊಂಡಿದ್ದರು ಶರಣಕೇತಯ್ಯ ಅನಿವಾರ್ಯವಾಗಿ ಸತಿ-ಸುತರನ್ನೇ ವಧೂವರರನ್ನಾಗಿ ಮಾಡಿ ಮದುವೆ ನೆರವೇಸಿಬಿಟ್ಟ! ಪರವಾದಿಗಳಿಗೆ ಈಗ ಮತ್ತೆ ಅವಕಾಶ ದೊರೆಯಿತು. ಕೇತಯ್ಯನನ್ನು ಕೊಲ್ಲ ಬೇಕೆಂದು ಅವನ ಮೇಲೆ ಏರಿ ಹೋದರು. ಆಗ ಅವರ ಕಣ್ಣು ಹೋದವು, ಕಾಲು ಕಳೆಚಿದವು, ಬುದ್ಧಿ ಭ್ರಮೆ ಯಾಯಿತು. ಪಶ್ಚಾತ್ತಾಪ ಪಟ್ಟರು. ಆದರೆ ಸಕಲ ಜೀವಿಗಳಿಗೆ ಲೇಸನೆ ಬಯಸುವ ಶರಣ ಕೇತಯ್ಯ ಅವರೆಲ್ಲರಿಗೂ ವೀರಶೈವ ತತ್ವಗಳನ್ನು ಬೋಧಿಸಿದ; ಲಿಂಗದೀಕ್ಷೆಮಾಡಿದ. ಭವಿಗಳಾಗಿದ್ದ ಅವರನ್ನು ಶಿವಾನು ಭವಿಗಳನ್ನಾಗಿ ಮಾಡಿದ. ಅವರೆಲ್ಲರಿಗೂ ಪುನರ್ಜನ್ಮ ಕೊಟ್ಟ. ವೀರಶೈವ ಧರ್ಮನಿಷ್ಠೆಯನ್ನು ಲೋಕದಲ್ಲಿ ಬೆಳಗಿದ ಈ ಮಹಾಶರಣನ ಬಗೆಗೆ ಶಂಕರಲಿಂಗ ಒಂದು ರಗಳೆಯನ್ನೇ ಬರೆದಿದ್ದಾನೆ. ಈತನ ಕತೆಯು ವೀರ ಶೈವ ಪುರಾಣಗಳಲ್ಲಿ ಉಲ್ಲೇಖನಗೊಂಡಿದೆ. ಸಕಲಪುರಾ ತನರ ವಚನಗಳ ಕಟ್ಟನಲ್ಲಿ ಈ ಕೇತಯ್ಯನ ಸುಮಾರು ವಚನಗಳು ದೊರೆಯುತ್ತವೆ. ಅವುಗಳಲ್ಲಿ ಶಿವಾನು ಭವದ ವೈಭವ, ಷಟ್‌ಸ್ಥಲ ತತ್ವಜ್ಞಾನದ ಆಳ ಸಾಹಿತ್ಯದ ವೈಖರಿಯನ್ನು ನೋಡಬಹುದು. ಶಿವಾನು ಭವದ ತತ್ವಗಳು ಪ್ರಫುಲ್ಲಿತವಾಗಿ ಈ ವಚನಗಳಲ್ಲಿ ಮೈದಳೆದಿವೆ. ಓದುಗರಿಗಾಗಿ ಅವನ ಕೆಲವು ವಚನ ಗಳನ್ನು ಇಲ್ಲಿ ಎತ್ತಿಕೊಡಲಾಗಿದೆ.

ಬಸವೇಶ್ವರಂಗೆ ಸರ್ವಗುಣಶೀಲ
ಚೆನ್ನಬಸವಣ್ಣಂಗೆ ದಿವ್ಯ ಜ್ಞಾನಗುಣಶೀಲ
ಪ್ರಭುದೇವರಿಗೆ ಬಸವಣ್ಣ ಚೆನ್ನಬಸವಣ್ಣನ
ಉಭಯ ಗುಣಶೀಲ
ಮಡಿವಾಳಯ್ಯಂಗೆ ವೀರ ಗುಣಶೀಲ
ಅಜಗಣ್ಣಂಗೆ ಐಕ್ಯ ಗುಣಶೀಲ
ಸಿದ್ಧರಾಮಯ್ಯಂಗೆ ಯೋಗ ಗುಣಶೀಲ
ನಿಜಗುಣಂಗೆ ಆತ್ಮ ಗುಣಶೀಲ
ಚಂದಯ್ಯಂಗೆ ವೈರಾಗ್ಯ ಗುಣಶೀಲ
ಘಟ್ಟವಾಳಂಗೆ ತ್ರಿವಿಧ ಗುಣಶೀಲ
ಮೋಳಿಗೆಯ್ಯಂಗೆ ಭೇದ ಗುಣಶೀಲ
ಅಕ್ಕಗಳಿಗೆ ನಿರ್ವಾಣ ಗುಣ ಶೀಲ
ಮಿಕ್ಕಾದ ಪ್ರಮಥರಿಗೆಲ್ಲಕ್ಕೂ ಸ್ವತಂತ್ರ ಶೀಲ
ಎನಗೆ ಏಲೇಶ್ವರ ಲಿಂಗವು ಕೊಟ್ಟದೊಂದೆ
ವಿಶ್ವಾಸ ಶೀಲ.

ಈ ವಚನದಲ್ಲಿ ಶರಣರು ಸರ್ವ ಸ್ವತಂತ್ರರು. ಯಾರ ಅಧೀನಕ್ಕೂ ಒಳಗಾಗರು. ಹಾಗೆಯೇ ಪ್ರತಿಯೊಬ್ಬ ಶರಣರ ವಿಶಿಷ್ಟವಾದ ಶೀಲವನ್ನು ಅದೆಷ್ಟು ಚೆನ್ನಾಗಿ ಈ ವಚನದಲ್ಲಿ ಕ್ರೋಡೀಕರಿಸಿ ದ್ದಾರೆ–ನೋಡಿ. ಕೇತಯ್ಯನವರ ಗ್ರಾಹಕ ಶಕ್ತಿ ಅಪೂರ್ವವಾದುದು. ಇನ್ನೊಂದು ವಚನವಿದು

ವ್ರತಶುದ್ಧವಾಗಿ ನಡೆವಾತನೆ ಎನಗೆ ಅಧೀನದರಸು ಪಂಚಚಾರ ಶುದ್ಧವಾಗಿ ನಡೆವಾತನೆ ಎನಗೆ ಸದ್ಗುರುಮೂರ್ತಿ ಆವಾವ ನೇಮಕ್ಕೂ ಭಾವಶುದ್ಧವಾಗಿ ಇಷ್ಟ ಮಹಾಭಕ್ತನೆ, ಏಲೇಶ್ವರಲಿಂಗವು ತಾನೆ.

ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ ಷಟ್ ಸ್ಥಳಗಳೇ ಆತ್ಮವಾಗಿರುವ ವಿರಶೈವ ಧರ್ಮವು ಒಂದು ಜಾತಿಯಲ್ಲ, ಒಂದು ಪಂಥವಲ್ಲವೆಂಬುದನ್ನು ಇಂದಿನವರು ಚೆನ್ನಾಗಿ ತಿಳಿದ ಕೊಳ್ಳಬೇಕು. ಆಚಾರ ಪ್ರಭಾವವಾದ ಈ ಧರ್ಮ ಸೂಕ್ಷ್ಮಗಳನ್ನು ಕೇತಯ್ಯನವರು ಮನೋಹರವಾಗಿ ಈ ವಚನದಲ್ಲಿ ನಿರೂಪಿಸಿದ್ದಾರೆ

ಮಲವ ಕಳೆವಲ್ಲಿ, ಜಲವ ಬಿಡುವಲ್ಲಿ, ರುಜೆರೋಗ ಗಳು ಬಿಡುವಲ್ಲಿ, ಸಕಲ ಸುಖ ಭೋಗಂಗಳ ಹಿಡಿ ವಲ್ಲಿ, ಅಧಮ ವಿಶೇಷವೆಂಬ ಭಾವಂಗಳು ಅಂಗವ ಮುಟ್ಟುವಲ್ಲಿ, ಅಂಗಕ್ಕೆ ಕಟ್ಟು, ಆತ್ಮಂಗೆ ವ್ರತ, ಏಲೇಶ್ವರಲಿಂಗದ ಕೂಟತಪ್ಪದಿರಬೇಕು,

ಲಿಂಗದೇಹಿ ಸದಾಶುಚಿ. ಅವನಿಗೆ ಸೂತಕವಿಲ್ಲ, ಪಾತಕವಿಲ್ಲ. ಈ ಮಾತುಗಳನ್ನು ಮೇಲಣ

[25ನೇ ಪುಟ ನೋಡಿ]

ರಾಮಚರಿತಮಾನಸದ

# ಧಾರ್ಮಿಕ ನೆಲೆ

ಹಿಂದೀಮೂಲ: ದಿ. ಆಚಾರ್ಯರಾಮಚಂದ್ರ ಶುಕ್ಲ

ಅನುವಾದ: ರಾ. ಲಕ್ಷ್ಮೀನಾರಾಯಣ

ಧರ್ಮದ ರಸಾತ್ಮಕ ಅನುಭೂತಿಯೇ ಭಕ್ತಿ ಯಾವ ಭಗವಂತನ ಅನಂತತೆಯ ಛಾಯೆ ಅಖಿಲ ಜಗತ್ತಿನ ಅಸ್ತಿತ್ವದಲ್ಲಿ ನಮಗೆ ಕಂಡು ಬರುತ್ತದೆಯೋ ಅಂಥ ಭಗವಂತನ ಸತ್ ಸ್ವರೂಪದ ವ್ಯಕ್ತ ಪ್ರವೃತ್ತಿಯೇ ಧರ್ಮ, ಕುಟುಂಬ ಸಮಾಜಗಳಂಥ ಸಣ್ಣ ಸಣ್ಣ ಕ್ಷೇತ್ರಗಳಿಂದ ಹಿಡಿದು ಸಮಸ್ತ ಭೂಮಂಡಲ ಹಾಗೂ ಅಖಂಡ ಜಗತ್ತಿನ ವಿಶಾಲ ಕ್ಷೇತ್ರದ ನಡುವೆ ಈ ಪ್ರವೃತ್ತಿಯ ಸಾಕ್ಷಾತ್ಕಾರ ಹೊಂದಲು ಸಾಧ್ಯ. ಕುಟುಂಬ ಮತ್ತು ಸಮಾಜಗಳ ರಕ್ಷಣೆಯಲ್ಲಿ, ಲೋಕವನ್ನು ಮುನ್ನಡೆಸುವಲ್ಲಿ, ಹಾಗೂ ಸಮಷ್ಟಿರೂಪದಲ್ಲಿ ಅಖಿಲ ವಿಶ್ವದ ಶಾಶ್ವತ ಅಸ್ತಿತ್ವದಲ್ಲಿ ಸತ್ಯಹ ಈ ಪ್ರವೃತ್ತಿ ಗೋಚರವಾಗುತ್ತದೆ. ಗಮನಿಸಬೇಕಾದ ವಿಚಾರವೆಂದರೆ ಎಷ್ಟೆಷ್ಟು ವಿಶಾಲವಾದ ಕ್ಷೇತ್ರಗಳಲ್ಲಿ ಈ ಪ್ರವೃತ್ತಿ-ಯ ಸಾಕ್ಷಾತ್ಕಾರವನ್ನು ನಾವು ಹೊಂದುತ್ತೇವೆಯೋ ಅಷ್ಟಷ್ಟೂ ಉನ್ನತವಾದ ಭಾವನೆಗಳು ನಮಗೆ ಭಗ-ವತ್ ಸ್ವರೂಪದ ವಿಚಾರದಲ್ಲಿ ಉಂಟಾಗುತ್ತವೆ. ತಮ್ಮ ಒಂದು ಕುಲವಿಶೇಷದಲ್ಲಿಯೇ ಯಾರಿಗೆ ಈ ಪ್ರವೃತ್ತಿಯ ಅನುಭವವಾಗುತ್ತದೆಯೋ ಅಂಥವರ ಭಾವನೆಗಳು ಕುಲನಾಯಕ ಅಥವಾ ಕುಲದೇವತೆಯವರೆಗೆ ಮಾತ್ರ ನಿಲುಕುತ್ತವೆ. ಒಂದು ಜಾತಿಯೊಳಗೆ ಅಥವಾ ದೇಶ-ವಿದೇಶದೊಳಗೆ ಈ ಪ್ರವೃತಿಯ ಅನುಭೂತಿಯನ್ನು ಹೊಂದುವಂಥವರ ಭಾವನೆಗಳು ಆಜಾತಿಯ ಅಥವಾ ಆದೇಶದ ಮುಖಂಡರ ಇಲ್ಲವೆ ಆರಾಧ್ಯ ದೇವತೆಯವರೆಗೆ ನಿಲುಕುತ್ತವೆ. ಭಕ್ತನ ಭಾವನೆಗಳು ಇದಿಷ್ಟರವರೆಗೆ ಮಾತ್ರ ನಿಲುಕಿದರೆ ತೃಪ್ತವಾಗುವುದಿಲ್ಲ. ಅವನು ಅಖಂಡ ವಿಶ್ವದ ನಡುವೆ ಸತ್‌ನ ಈ ಪ್ರವೃತ್ತಿಯ ಸಾಕ್ಷಾತ್ಕಾರದ ಸಾಧನೆ ಮಾಡುತ್ತಾನೆ. ಅವನ ಒಳಗಿನ ಚಿತ್ ಹೊರಗಿನ ಸತ್‌ನ್ನು ಸಾಕ್ಷಾತ್ಕರಿಸಿ ಕೊಂಡಾಗ ಆನಂದದ ಆವಿರ್ಭಾವವಾಗುತ್ತದೆ. ಈ ಒಂದು ಸಾಧನೆಯಿಂದ ಅವನು ಭಗವಂತನ ಸಾಮೀಪ್ಯ ಲಾಭವನ್ನು ಹೊಂದುತ್ತ ಹೋಗುತ್ತಾನೆ. ಆದ್ದರಿಂದಲೇ ತುಳಸೀದಾಸರ ಶ್ರೀ ರಾಮ ಅಂತರ್ಯಾಮಿಗಿಂತ ಹೆಚ್ಚಾಗಿ ಬಹಿರ್ಯಾಮಿಯಂತೆ ಕಂಡು ಬರುತ್ತಾನೆ,

ಮೇಲೆ ಹೇಳಿದ ವಿಚಾರಗಳಿಂದ ಸತ್ ಸ್ವರೂಪದ ವ್ಯಕ್ತ ಪ್ರವೃತ್ತಿಯ ಅರ್ಥಾತ್ ಧರ್ಮದ ಕೆಲವು ಉನ್ನತ ಹಾಗೂ ನಿಮ್ನ ನೆಲೆಗಳು ಗೋಚರವಾಗುತ್ತವೆ. ಅವು ಗೃಹಧರ್ಮ, ಕುಲಧರ್ಮ, ಸಮಾಜಧರ್ಮ, ಲೋಕಧರ್ಮ ಹಾಗೂ ವಿಶ್ವಧರ್ಮ ಅಥವಾ ಪೂರ್ಣಧರ್ಮ. ಯಾವುದೋ ಒಂದು ಪರಿಮಿತ ವರ್ಗದ ಕಲ್ಯಾಣವನ್ನು ಗುರಿಯಾಗಿ ಉಳ್ಳ ಧರ್ಮಕ್ಕಿಂತ ವಿಶಾಲ ಜನತೆಯ ಕಲ್ಯಾಣವನ್ನು ಗುರಿಯಾಗಿಟ್ಟು ಕೊಂಡ ಧರ್ಮ ಉನ್ನತಶ್ರೇಣಿಯ ಧರ್ಮ. ಧರ್ಮದ ಔನ್ನತ್ಯ ಅದರ ಗುರಿಯ ವ್ಯಾಪಕತ್ವದ ಮೇಲೆ ನಿರ್ಧರಿತವಾಗುತ್ತದೆ. ಗೃಹಧರ್ಮ ಅಥವಾ ಕುಲಧರ್ಮಕ್ಕಿಂತ ಸಮಾಜಧರ್ಮ ಶ್ರೇಷ್ಠವಾದ್ದು. ಅಂತೆಯೇ ಸಮಾಜಧರ್ಮಕ್ಕಿಂತ ಲೋಕಧರ್ಮ, ಲೋಕಧರ್ಮಕ್ಕಿಂತ ವಿಶ್ವಧರ್ಮ ಶ್ರೇಷ್ಠವಾದ್ದು. ವಿಶ್ವಧರ್ಮದಲ್ಲಿ ಧರ್ಮ ಪರಿಶುದ್ಧವೂ ಪರಿಪೂರ್ಣವೂ ಆದ ರೂಪದಲ್ಲಿ ಕಂಡು ಬರುತ್ತದೆ. ಈ ಪೂರ್ಣ ಧರ್ಮ ಅಂಗಿ ಉಳಿದವು ಅಂಗಗಳು. ಅಖಿಲ ವಿಶ್ವದ ಅಸ್ತಿತ್ವಕ್ಕೆ ಕಾರಣವಾದ ಈ ಪೂರ್ಣಧರ್ಮ ವಾಸ್ತವವಾಗಿ ಪೂರ್ಣಪುರುಷ ಅಥವಾ ಪುರುಷೋತ್ತಮನಲ್ಲಿ ಮಾತ್ರ ಇರುವಂಥದು. ನಿಜವಾದ ಭಕ್ತರಿಗೆ ಮಾತ್ರ ಅದರ ಧಾರ್ಮಿಕ ಅನುಭೂತಿಯಾಗುತ್ತದೆ. ಈ

ಅನುಭೂತಿಗನುಗುಣವಾಗಿ ಅವರ ಆಚರಣೆಯೂ ಉತ್ತರೋತ್ತರ ವಿಕಾಸವನ್ನು ಹೊಂದುತ್ತ ಹೋಗುತ್ತದೆ. ಗೃಹಧರ್ಮವಷ್ಟನ್ನೇ ದೃಷ್ಟಿಯಲ್ಲಿಟ್ಟು ಕೊಂಡವನು, ಒಂದು ಕುಟುಂಬದ ರಕ್ಷಣೆಯಾದದ್ದನ್ನು ಕಂಡು, ವರ್ಗಧರ್ಮ ಅಥವಾ ಕುಲಧರ್ಮವಷ್ಟನ್ನೇ ದೃಷ್ಟಿಯಲ್ಲಿಟ್ಟು ಕೊಂಡವನು ವರ್ಗವೊಂದರ ಅಥವಾ ಸಮಾಜವೊಂದರ ರಕ್ಷಣೆಯಾದದ್ದನ್ನು ಕಂಡು, ವಿಶ್ವ ಧರ್ಮದಲ್ಲಿ ದೃಷ್ಟಿಯುಳ್ಳವನು ಇಡೀ ಲೋಕದ ಅಥವಾ ಸಮಸ್ತ ಮಾನವ ಕುಲದ ರಕ್ಷಣೆಯಾದದ್ದನ್ನು ಕಂಡು ಆನಂದಿತನಾಗುತ್ತಾನೆ. ಪೂರ್ಣಧರ್ಮ ಸ್ವರೂಪನಾದ ಭಗವಂತನ ನಿಜವಾದ ಭಕ್ತರಾದಂಥವರು ಮಾತ್ರ ಪೂರ್ಣಧರ್ಮ ಅಥವಾ ಶುದ್ಧಧರ್ಮದ ಸ್ವರೂಪವನ್ನು ತಮ್ಮ ಮುಂದೆ ತಂದುಕೊಳ್ಳಲು ಹಾಗೂ ಇತರರ ಮುಂದೆ ತರಲು ಸಮರ್ಥರಾಗುತ್ತಾರೆ. ಆದ್ದರಿಂದ ಅವರು ಕೀಟದಂಥ ಕ್ಷುದ್ರ ಜಂತುವಿನಿಂದ ಹಿಡಿದು ಮಾನವನ ತನಕ ಅಖಿಲ ಜೀವ ಜಾತದ ರಕ್ಷಣೆಯಾದದ್ದನ್ನು ಕಂಡು ಆನಂದಿತರಾಗುತ್ತಾರೆ. ವಸ್ತುವಿನ ವಿಸ್ತಾರಕ್ಕನುಗುಣವಾಗಿ ಅವರ ಆನಂದವೂ ಉನ್ನತಸ್ತರದ್ದಾಗಿರುತ್ತದೆ.

ಮೇಲೆ ಉಲ್ಲೇಖಿಸಲಾದ ಧರ್ಮದ ಉನ್ನತ ಹಾಗೂ ನಿಮ್ನ ನೆಲೆಗಳು ಅದರ ಸ್ವರೂಪಕ್ಕೆ ಸಂಬಂಧಪಟ್ಟಂಥವೇ ಹೊರತು, ಅದರ ಆಚರಣೆಯ ಸ್ವರೂಪಕ್ಕೆ ಸಂಬಂಧಪಟ್ಟವಲ್ಲ. ಅದರ ಆಚರಣೆಯ ಸ್ವರೂಪವೇ ಬೇರೆ. ಅತ್ಯಂತ ಉನ್ನತ ನೆಲೆಯ ಧರ್ಮದ ಆಚರಣೆ ತೀರ ಸಾಧಾರಣ ದರ್ಜೆಯದಾಗಿರಲು ಸಾಧ್ಯ. ಅಂತೆಯೇ ತೀರ ಕೆಳಗಿನ ನೆಲೆಯ (ನಿಮ್ನನೆಲೆ) ಧರ್ಮದ ಆಚರಣೆ ಅತ್ಯಂತ ಉನ್ನತ ಸ್ತರದ್ದಾಗಿರಲು ಸಾಧ್ಯ. ಬಡವರ ರಕ್ತವನ್ನು ಹೀರುವ ಶ್ರೀಮಂತರು ಇರುವೆಯ ಗೂಡಿನ ಸುತ್ತ ಅಕ್ಕಿ ನುಚ್ಚನ್ನು ಹಾಕುವುದನ್ನು ಕಾಣುತ್ತೇವೆ. ಕ್ಷಾಮ ಪೀಡಿತರ ನಿಧಿಗೆ ಚಿಕ್ಕಾಸನ್ನೂ ಕೊಡದ ವ್ಯಕ್ತಿ, ನೀರಿನಲ್ಲಿ ಮುಳುಗುತ್ತಿರುವ ತನ್ನ ಸ್ನೇಹಿತನ ಪ್ರಾಣವನ್ನುಳಿಸಲು, ತನ್ನ ಪ್ರಾಣವನ್ನು ಅಪಾಯದ ದವಡೆಗೆ ಸಿಲುಕಿಸಲು ಸಿದ್ಧನಿರುವುದನ್ನೂ ಕಾಣುತ್ತೇವೆ.

ಗೋಸ್ವಾಮಿ ತುಳಸೀದಾಸರ ಭಕ್ತಿ ಪದ್ಧತಿ ಭಗವಂತನ ಸತ್ ಸ್ವರೂಪದ ಅಭಿವ್ಯಕ್ತಿ ಮತ್ತು ಪ್ರವೃತ್ತಿಗಳನ್ನು ಕುರಿತದ್ದಾಗಿದೆ. ಅವರ ಶ್ರೀರಾಮ ಪೂರ್ಣಧರ್ಮ ಸ್ವರೂಪಿ, ರಾಮನ ಲೀಲಾ ಕ್ಷೇತ್ರದಲ್ಲಿ ಧರ್ಮದ ನಾನಾ ಮುಖಗಳು ಪ್ರಕಟ ಗೊಳ್ಳುವುದನ್ನವರು ಕಂಡಿದ್ದಾರೆ. ಧರ್ಮದ ಪ್ರಕಟಣೆ ಅರ್ಥಾತ್ ಭಗವಂತನ ಸತ್ ಸ್ವರೂಪದ ಅಭಿವ್ಯಕ್ತಿ ಈ ನಾಮ ರೂಪಾತ್ಮಕವಾದ ಜಗತ್ತಿನಲ್ಲಿಯೇ ಆಗುತ್ತದೆ. ಭಗವಂತನ ಪ್ರಕಟ ಕಲೆಯೆನಿಸಿದ ಈ ಸೃಷ್ಟಿಯಲ್ಲಿ ಆನಂದವನ್ನು ಪಡೆಯದೆ, ಹೊರ ಜಗತ್ತಿನ ನಾನಾ ಕಾರ್ಯ ಕ್ಷೇತ್ರಗಳ ನಡುವೆ ಧರ್ಮದ ದಿವ್ಯ ಜ್ಯೋತಿ ಪ್ರಜ್ವಲಿಸುವುದನ್ನು ಕಾಣದೆ, ಕಣ್ಣು ಮುಚ್ಚಿಕೊಂಡು ತಮ್ಮ ಅಂತರಂಗದ ಯಾವುದೋ ಮೂಲೆಯಲ್ಲಿ ಭಗವಂತನನ್ನು ಹುಡುಕತೊಡಗುವವರ ಮಾರ್ಗಕ್ಕಿಂತ ಭಿನ್ನವಾದದ್ದು ತುಳಸೀದಾಸರ ಭಕ್ತಿ ಮಾರ್ಗ. ಅವರ ಮಾರ್ಗ ಭಗವಂತನ ಸತ್ ಸ್ವರೂಪವನ್ನು ಗ್ರಹಿಸಿ ಧರ್ಮದ ನಾನಾ ನೆಲೆಗಳ ಮುಖಾಂತರ ಸಾಗುತ್ತಾ ಹೋಗುತ್ತದೆ. ಭಕ್ತನಿಗೆ ಜಗತ್ತಿನಲ್ಲಿ ಯಾವಾಗ ಧರ್ಮದ ಸ್ವರೂಪ ಮರೆಯಾದಂತೆ ಅಥವಾ ಆಚ್ಛಾದಿತವಾದಂತೆ ಕಂಡು ಬರುತ್ತದೆಯೋ ಆಗ ಅವನಿಗೆ ಭಗವಂತನೇ ತನ್ನ ಕಣ್ಣೆದುರಿನಿಂದ ಅಂತರ್ಧಾನವಾದಂತೆ ಭಾಸವಾಗುತ್ತದೆ. ಅವನು ಭಗವಂತನ ವಿಯೋಗದ ತಳಮಳವನ್ನನುಭವಿಸುತ್ತಾನೆ. ಯಾವಾಗ ಮತ್ತೊಮ್ಮೆ ಅಧರ್ಮದ ಅಂಧಕಾರವನ್ನು ಭೇದಿಸಿ ಕೊಂಡು ಧರ್ಮದ ಜ್ಯೋತಿ ಹೊರ ಹೊಮ್ಮುತ್ತದೆಯೋ ಆಗ ಅವನಿಗೆ ತನ್ನ ಪ್ರಿಯತಮನಾದ ಭಗವಂತನ ಮನೋಹರವಾದ ರೂಪವೇ ಕಣ್ಣು ಮುಂದೆ ಬಂದಂತಾಗಿ ಅವನು ಪುಲಕಿತನಾಗುತ್ತಾನೆ.

ನಮ್ಮಲ್ಲಿ ಧರ್ಮದಿಂದ ಅಭ್ಯುದಯ ಮತ್ತು ಮೋಕ್ಷ ಎರಡೂ ಸಿದ್ಧಿಸುತ್ತವೆಂದು ಹೇಳಿದೆ. ಆದ್ದರಿಂದ ಮೋಕ್ಷದ ಮಾರ್ಗ—ಅದು ಯಾವುದೇ ರೀತಿಯಿಂದಾದರೂ ಸರಿ ಧರ್ಮದ ಮಾರ್ಗದಿಂದ ಪೂರ್ತಿ ಬೇರೆಯಾಗಿರಲು ಸಾಧ್ಯವಿಲ್ಲ. ಧರ್ಮದ ವಿಕಾಸ ಈ ಲೋಕದಲ್ಲೇ, ನಮ್ಮ

ಪರಸ್ಪರ ವ್ಯವಹಾರಗಳನ್ನು ಪ್ರೇರಿಸುವ ಪ್ರೇರಕ ಶಕ್ತಿ ನಮ್ಮ ರಾಗಾತ್ಮಕ ಅಥವಾ ಭಾವಾತ್ಮಕ ಹೃದಯ. ಆದ್ದರಿಂದ ನಮ್ಮ ಜೀವನ ಪರಿಪೂರ್ಣ ಗೊಳ್ಳುವುದು ಕರ್ಮ, (ಧರ್ಮ) ಜ್ಞಾನ ಹಾಗೂ ಭಕ್ತಿ ಈ ಮೂರರ ಸಮನ್ವಯದಿಂದ. ಸಾಧನೆ ಯಾವುದೇ ರೀತಿಯದಾಗಿರಲಿ, ಸಾಧಕನ ಸಂಪೂರ್ಣ ಸತ್ವದೊಂದಿಗೆ ನಡೆಯಬೇಕು. ಅದರ ಯಾವುದೇ ಅಂಗವನ್ನು ಪೂರ್ತಿಯಾಗಿ ಬಿಟ್ಟು ನಡೆಸುವುದಲ್ಲ. ಕೆಲವರು ಜ್ಞಾನವನ್ನು ಪ್ರಧಾನವಾಗಿಟ್ಟು ಕೊಂಡು ಧರ್ಮ ಮತ್ತು ಉಪಾಸನೆಯನ್ನು ಅದರ ಅಂಗ ರೂಪವಾಗಿಟ್ಟು ಕೊಂಡಿರಬಹುದು, ಕೆಲವರು ಭಕ್ತಿಯನ್ನು ಪ್ರಧಾನವಾಗಿಟ್ಟು ಕೊಂಡು ಜ್ಞಾನ ಮತ್ತು ಕರ್ಮ ಧರ್ಮವನ್ನು ಅಂಗ ರೂಪವಾಗಿಟ್ಟು ಕೊಂಡಿರಬಹುದು. ತುಳಸೀದಾಸರು ಭಕ್ತಿಯನ್ನು ಪ್ರಧಾನವಾಗಿಟ್ಟು ಕೊಂಡು ಮುನ್ನಡೆದವರಾಗಿದ್ದರು. ಅಂದರೆ ಅವರು ಭಕ್ತಿಮಾರ್ಗಿಗಳು. ಅವರ ಭಕ್ತಿ ಮಾರ್ಗದಲ್ಲಿ ಧರ್ಮ (ಕರ್ಮ) ಭಕ್ತಿ ಮತ್ತು ಜ್ಞಾನ ಮೂರೂ ಸೇರಿವೆಯಾದರೂ ಧರ್ಮ ಪೂರ್ಣ ಪ್ರಮಾಣದಲ್ಲಿ ಸೇರಿದೆ. ಅವರಲ್ಲಿ ಭಕ್ತಿಭಾವಕ್ಕೂ ಧರ್ಮಭಾವಕ್ಕೂ ಶಾಶ್ವತವಾದ ಸಂಬಂಧವಿದೆ.

ರಾಮಚರಿತಮಾನಸದಲ್ಲಿ ಧರ್ಮದ ಉನ್ನತ ಮತ್ತು ನಿಮ್ನ ನೆಲೆಗಳ ವಿವಿಧ ದೃಶ್ಯಗಳ ದರ್ಶನ ನಮಗಾಗುತ್ತದೆ. ಈ ಒಂದು ವೈವಿಧ್ಯದ ದೆಸೆ ಯಿಂದಾಗಿ ಅಲ್ಲಲ್ಲಿ ಕೆಲವೊಂದು ಸಂದೇಹಗಳು ಏಳುತ್ತವೆ. ಉದಾಹರಣೆಗೆ ಭರತ ಹಾಗೂ ವಿಭೀಷಣರ ಪಾತ್ರಗಳನ್ನೇ ತೆಗೆದು ಕೊಳ್ಳಿ.

ಯಾವ ಭರತನ ಲೋಕಪಾವನ ಚಾರಿತ್ರ್ಯದ ದಿವ್ಯ ದೀಪ್ತಿಯಿಂದ ನಮ್ಮ ಹೃದಯ ದೀಪ್ತಗೊಳ್ಳುತ್ತದೆಯೋ ಅಂಥ ಭರತನೇ ತನ್ನ ಹೆತ್ತ ತಾಯಿಯನ್ನು ಕಠೋರ ಶಬ್ದಗಳಿಂದ ಮನಸ್ವೀ ನಿಂದಿಸುವುದನ್ನು ಕಂಡಾಗ ಕೆಲವರಿಗೆ ಭಾರೀ ಸಂದೇಹವುಂಟಾಗುತ್ತದೆ. ಲೋಕ ಧರ್ಮ ಅಥವಾ ಶಿಷ್ಟಾಚಾರದ ಬಗ್ಗೆ ಯಾವಾಗಲೂ ಅತ್ಯಂತ ಕಾಳಜಿ ಹೊಂದಿರುತ್ತಿದ್ದ ತುಳಸೀದಾಸರಂಥವರು ತಮ್ಮ ಕಾವ್ಯದ ಸರ್ವೋತ್ಕೃಷ್ಟ ಪಾತ್ರದ ಮೂಲಕ ಶಿಷ್ಟಾಚಾರದ ಉಲ್ಲಂಘನೆಯನ್ನು ಹೇಗಾದರೂ ಮಾಡಿಸಿಯಾರು ? ಧರ್ಮದ ನಾನಾ ನೆಲೆಗಳ ವಿಷಯವಾಗಿ ನಾವು ಮೇಲೆ ವ್ಯಕ್ತಪಡಿಸಿರುವ ವಿಚಾರಗಳನ್ನು ಗಮನಿಸಿ ಅರ್ಥಮಾಡಿ ಕೊಂಡರೆ ಕೂಡಲೇ ಅದಕ್ಕೆ ಉತ್ತರ ಸಿಗುತ್ತದೆ. ಧರ್ಮ ಎಷ್ಟೆಷ್ಟರ ಮಟ್ಟಿಗೆ ವಿಶಾಲ ಜನ ಸಮಷ್ಟಿಯ ಸುಖ ದುಃಖಗಳನ್ನು ಕುರಿತದ್ದಾಗಿರುತ್ತದೆಯೋ ಅಷ್ಟಷ್ಟರ ಮಟ್ಟಿಗೆ ಅದು ಉನ್ನತವೆಂದು ಪರಿಗಣಿಸಲ್ಪಡುತ್ತದೆ. ಎಂಬ ವಿಚಾರವನ್ನು ಈಗಾಗಲೇ ವಿವರಿಸಿದ್ದೇವೆ. ಧರ್ಮದ ಸ್ವರೂಪ ಎಷ್ಟೆಷ್ಟು ವಿಶಾಲವಾದ ಉದ್ದೇಶವನ್ನು ಹೊಂದಿರುತ್ತದೆಯೋ, ಆ ವೈಶಾಲ್ಯಕ್ಕನುಗುಣವಾಗಿ ಅದರ ಔನ್ನತ್ಯ ನಿರ್ಣಯಿಸಲ್ಪಡುತ್ತದೆ. ಪರಿಪೂರ್ಣವೂ ಶುದ್ಧವೂ ವಿಶಾಲವೂ ಆದ ಧರ್ಮಕ್ಕೆ ಧಿಕ್ಕಾರವುಂಟಾದಾಗ, ಉತ್ಕೃಷ್ಟ ಪಾತ್ರದ ಹೃದಯದಲ್ಲೂ ಕ್ರೋಧದ ಕಿಡಿ ಸಿಡಿದೇಳುವುದು ಸ್ವಾಭಾವಿಕ. ಶ್ರೀರಾಮ ಪೂರ್ಣ ಧರ್ಮ ಸ್ವರೂಪಿ ಏಕೆಂದರೆ ಅಖಿಲ ವಿಶ್ವದ ಅಸ್ತಿತ್ವಕ್ಕೆ ಅವನೇ ಕಾರಣ ಕರ್ತ. ಧರ್ಮವನ್ನು ವಿರೋಧಿಸುವುದೂ ಒಂದೇ ಶ್ರೀರಾಮನನ್ನು ವಿರೋಧಿಸುವುದೂ ಒಂದೇ ಯಾರಿಗೆ ರಾಮನು ಪ್ರಿಯನಲ್ಲವೋ ಅವರಿಗೆ ಧರ್ಮವೂ ಪ್ರಿಯವಲ್ಲ. ಆದ್ದರಿಂದಲೇ ತುಳಸೀದಾಸರು ಹೇಳುತ್ತಾರೆ.

"ಅಪ್ರಿಯರಾರಿಗೆ ಸೀತಾರಾಮರು, ಸ್ನೇಹಿಯೆ ಆದರು ತ್ಯಜಿಸವನನು ಕಡು ವೈರಿಯವೋಲ್."
ಈ ರಾಮ ವಿರೋಧದ ಅಥವಾ ಧರ್ಮ ವಿರೋಧದ ವ್ಯಾಪಕ ದುಷ್ಪರಿಣಾಮವನ್ನು ನಾವು ಮುಂದೆ ಕಾಣುತ್ತೇವೆ.

ಸೀತಾರಾಮರು ಅರಮನೆಯನ್ನು ತ್ಯಜಿಸಿ ಕಾಡಿಗೆ ಹೊರಟು ನಿಂತಾಗ ಜನತೆಯೆಲ್ಲಾ ಶೋಕ ಸಾಗರದಲ್ಲಿ ಮುಳುಗುತ್ತದೆ. ದಶರಥನು ಕೊನೆಯುಸಿರೆಳೆಯುತ್ತಾನೆ. ಧರ್ಮಕ್ಕೊದಗಿದ ಇಂಥ

ತಿರಸ್ಕಾರವನ್ನು ಕಂಡೂ, ಆ ತಿರಸ್ಕಾರದಿಂದಾದ ಇಂಥ ಕಟು ಪರಿಣಾಮವನ್ನು ನೋಡಿಯೂ ಸಿಟ್ಟಿಗೇಳದಿರಲು, ಅಥವಾ ತಾನೊಬ್ಬ ಸಾಧುವ್ಯಕ್ತಿಯೆಂದು ತೋರಿಸಿಕೊಳ್ಳುವುದಕ್ಕಾಗಿ ಅದನ್ನು ನುಂಗಿಕೊಂಡು ತೆಪ್ಪಗಿರಲು ಭರತನೇನು ಸಂಸಾರವನ್ನು ತ್ಯಜಿಸಿದ ವಿರಕ್ತನಾಗಿರಲಿಲ್ಲ. ಒಂದು ವೇಳೆ ಅವನು ತನ್ನ ತಾಯಿಯನ್ನು, ಆಕೆ ತಾಯಿಯೆಂಬ ಒಂದೇ ಒಂದು ಕಾರಣಕ್ಕಾಗಿ ಒಂದಾದರೂ ಕಠಿಣವಾದ ಮಾತನ್ನು ಆಡದೆ ಸುಮನಿದ್ದಿದ್ದರೆ, ಅವನ ಅಂತರಂಗದಲ್ಲಿ ಶ್ರೀರಾಮನ ವಿಷಯದಲ್ಲಿ ಅವನು ತಳೆದಿದ್ದ ಪ್ರೀತಿಗೆ, ಧರ್ಮದ ವಿಷಯಕ್ಕೆ ಅವನಿಗಿದ್ದ ಪ್ರೇಮಕ್ಕೆ ಏನು ಮೌಲ್ಯವಿರುತ್ತಿತ್ತು ? ತಮ್ಮ ಪ್ರೀತಿ ಪಾತ್ರನಿಗೊದಗಿದ ತಿರಸ್ಕೃತಿ ಮತ್ತು ಸಂಕಷ್ಟವನ್ನು ಕಂಡು ತಳಮಳಗೊಳ್ಳದ ವ್ಯಕ್ತಿಯ ಪ್ರೇಮವನ್ನು ಗುರುತಿಸುವುದಾದರೂ ಹೇಗೆ ? ಧರ್ಮ ಸ್ವರೂಪನಾದ ಭಗವಾನ್ ಶ್ರೀರಾಮಚಂದ್ರನ ನಿಜವಾದ ಪ್ರೇಮಿ ಹಾಗೂ ಭಕ್ತನ ರೂಪದಲ್ಲಿ ಭರತನ ಪಾತ್ರವನ್ನು ನಮ್ಮ ಕಣ್ಮುಂದೆ ಚಿತ್ರಿಸಲಾಗಿದೆ. ಆದ್ದರಿಂದ ಕೇವಲ ಕಾವ್ಯ ದೃಷ್ಟಿಯಿಂದ ನೋಡಿದರೂ ಕೂಡ, ಅವನ ಶ್ರೀರಾಮ ಪ್ರೇಮದದ್ಯೋತಕವಾದ ಈ ಕ್ರೋಧವೂ ತನ್ನದೇ ಆದ ವಿಶಿಷ್ಟ ಉದ್ದೇಶವನ್ನು ಹೊಂದಿದೆ. ಮಹಾಕಾವ್ಯ ಅಥವಾ ಖಂಡ ಕಾವ್ಯಗಳಲ್ಲಿ ಧರ್ಮದ ಮೇಲೆ ಕ್ರೂರವೂ ನಿಷ್ಠುರವೂ ಆದ ಆಘಾತವಾದದ್ದನ್ನು ಕಂಡಾಗ, ಸಹೃದಯನ ಹೃದಯ, ಅನ್ಯಾಯಿಯೂದವನಿಗೆ ಶಿಕ್ಷೆ–ಅದು ದಿಕ್ಕಾರದ ರೂಪದಲ್ಲಾದರೂ ಸರಿ–ಒದಗುವುದನ್ನು ಕಾಣಲು ಕಾತರಿಸುತ್ತಿರುತ್ತದೆ. ಕಥೆಯಲ್ಲಿ ಆ ಅನ್ಯಾಯಿಯನ್ನು ಶಿಕ್ಷಿಸುವ ಪಾತ್ರ ಬಂದಾಗ ಸಹೃದಯನ ಹಂಬಲ ಪೂರ್ಣಗೊಳ್ಳುತ್ತದೆ ಈ ಕಾರ್ಯಕ್ಕೆ ಭರತನಿಗಿಂತಲೂ ಯೋಗ್ಯರು ಇನ್ನಾರು ತಾನೆ ಸಾಧ್ಯ ? ಯಾವ ಭರತನಿಗಾಗಿ ಕೈಕೇಯಿ ಇಷ್ಟೆಲ್ಲ ಅನರ್ಥವನ್ನು ಉಂಟುಮಾಡಿದಳೋ ಅಂಥ ಭರತನೇ ಅವಳನ್ನು ಛೀಮಾರಿ ಮಾಡಿದಾಗ ಕೈಕೇಯಿಗೆ ಅದೆಷ್ಟು ಆತ್ಮಗ್ಲಾನಿಯಾಗಿದ್ದಿರಬೇಕು ! ಇಂಥ ಆತ್ಮಗ್ಲಾನಿಯನ್ನುಂಟು ಮಾಡುವುದೂ ಕವಿಯ ಉದ್ದೇಶವಾಗಿತ್ತು. ಈ ಮಟ್ಟದ ಆತ್ಮಗ್ಲಾನಿ ಬೇರಿನ್ನಾವ ಉಪಾಯದಿಂದಲೂ ಸಾಧ್ಯವಾಗುತ್ತಿರಲಿಲ್ಲ.

ಮಥಿತಾರ್ಥ ಇಷ್ಟೇ; ಮೂಲ ಅಥವಾ ವ್ಯಾಪಕವಾದ ಉದ್ದೇಶವನ್ನು ಹೊಂದಿರುವ ಧರ್ಮಕ್ಕೆ ಅವಹೇಳನ ಉಂಟಾದಾಗ, ಆ ಅವಹೇಳನವನ್ನು ಮಾರ್ಮಿಕವಾಗಿಯೂ ಪರಿಣಾಮಕಾರಿಯಾಗಿಯೂ ವಿರೋಧಿಸುವ ಸಲುವಾಗಿ ಅದಕ್ಕಿಂತ ಸಂಕುಚಿತವಾದ ಧರ್ಮವನ್ನುಲ್ಲಂಘಿಸುವುದು ಅನುಚಿತವೇನಲ್ಲ. ಕಾವ್ಯದಲ್ಲಿ ಇಂಥ ಅವಹೇಳನದಿಂದ ಉಂಟಾಗುವ ತಳಮಳದ ಅನಿರ್ಬಂಧಿತ ಅಭಿವ್ಯಕ್ತಿಗೆ ಶಿಷ್ಟಾಚಾರವನ್ನು ಮೀರುವುದು ಪ್ರಾಯಶಃ ಅನಿವಾರ್ಯವಾಗುತ್ತದೆ.

ಈಗ ವಿಭೀಷಣನನ್ನೇ ತೆಗೆದುಕೊಳ್ಳಿ. ಗೃಹನೀತಿ ಅಥವಾ ಕುಲಧರ್ಮದ ಸ್ಥೂಲವೂ ಸಂಕುಚಿತವೂ ಆದ ದೃಷ್ಟಿಯಿಂದ ಜನ ಅವನನ್ನು "ಮನೆಗೆ ಮಾರಿ" ಎಂದೂ "ಭ್ರಾತೃದ್ರೋಹಿ" ಎಂದೂ ಕರೆಯುತ್ತಾರೆ. ಆದರೆ ತುಳಸೀದಾಸರು ಅವನನ್ನು ಭಗವದ್ಭಕ್ತನೆಂಬಂತೆ ಚಿತ್ರಿಸಿದ್ದಾರೆ. ಅವನನ್ನು ಭಕ್ತರ ಶ್ರೇಣಿಯಲ್ಲಿ ಸೇರಿಸುವಾಗ ತುಳಸೀದಾಸರ ದೃಷ್ಟಿ ಗೃಹನೀತಿ ಅಥವಾ ಕುಲಧರ್ಮದ ಪರಿಮಿತ ಕ್ಷೇತ್ರದಲ್ಲಿ ಬಂಧಿತವಾಗಿರದೆ ವ್ಯಾಪಕವಾದ ಉದ್ದೇಶವುಳ್ಳ ಧರ್ಮದ ಕಡೆಗಿತ್ತು. ಧರ್ಮದ ಉನ್ನತವೂ ವಿಶಾಲವೂ ಆದ ದೃಷ್ಟಿಗನುಗುಣವಾಗಿ ವಿಭೀಷಣನನ್ನು ಭಕ್ತನ ರೂಪದಲ್ಲಿ ಚಿತ್ರಿಸಲಾಗಿದೆ. ರಾವಣ ಲೋಕಕಂಟಕ. ಅವನ ಅತ್ಯಾಚಾರದಿಂದ ಮೂರೂ ಲೋಕಗಳು ವ್ಯಾಕುಲಗೊಂಡಿವೆ. ಅವನ ಅನುಯಾಯಿಗಳಾದ ರಾಕ್ಷಸರು ನಿಷ್ಕಾರಣವಾಗಿ ಜನಗಳನ್ನು ಪೀಡಿಸುತ್ತಾರೆ. ಋಷಿಮುನಿಗಳನ್ನು ಕೊಲ್ಲುತ್ತಾರೆ. ವಿಭೀಷಣ ಇವೆಲ್ಲವುಗಳಿಂದ ದೂರ ಇದ್ದಾನೆ. ಅವನು ರಾವಣನ ತಮ್ಮನೇ ಆದರೂ ಲಂಕೆಯ ಯಾವುದೋ ಒಂದು ಮೂಲೆಯಲ್ಲಿ ಸಾಧು ಜೀವನವನ್ನು ನಡೆಸುತ್ತಿದ್ದಾನೆ. ಅವನ ಹೃದಯದಲ್ಲಿ ಸಕಲ ಜಗದ್ರಕ್ಷಕನಾದ ಭಗವಂತನ ವಿಷಯಕ್ಕೆ ಭಕ್ತಿ ತುಂಬಿದೆ.

[ 25 ನೇ ಪುಟ ನೋಡಿ ]

# ಮಕ್ಕಳಿಗಾಗಿ ಸಾಹಿತ್ಯ

—ಸರೋಜ ನಾರಾಯಣರಾವ್

ಸಾಮಾನ್ಯವಾಗಿ ಎರಡೂವರೆ ಮೂರು ವರ್ಷ ವಯಸ್ಸಾಗುವ ವೇಳೆಗಾಗಲೇ ಮಕ್ಕಳಿಗೆ ಸಣ್ಣ ಪುಟ್ಟ ಕತೆಗಳನ್ನು ಕೇಳಿ ಅರ್ಥ ಮಾಡಿ ಕೊಳ್ಳುವ ಸಾಮರ್ಥ್ಯ ಬಂದಿರುತ್ತದೆ. ಕಾಗೆ, ಗುಬ್ಬಚ್ಚಿ, ಇಲಿ, ಮೊಲ, ನರಿ, ಬೆಕ್ಕು ಇಂತಹ ಪ್ರಾಣಿಗಳ ಕತೆಗಳನ್ನು ಆಸೆಯಿಂದ ಕೇಳುತ್ತಾರೆ. ದೇವರು, ರಾಕ್ಷಸರು, ಅಪ್ಸರೆಯರು, ಮಂತ್ರವಾದಿ ಗಳು ಮತ್ತು ಮಾಯಾಜಾಲದ ಕತೆಗಳು ಕ್ರಮೇಣ ಅವರ ಆಸಕ್ತಿಯನ್ನು ಕೆರಳಿಸುತ್ತವೆ 'ಕತೆ' ಮಕ್ಕಳ ಕಣ್ಣು ಮುಂದೆ ಹೊಸ ಲೋಕವನ್ನೇ ಸೃಷ್ಟಿಸುತ್ತದೆ. ಕತೆಗಳಲ್ಲಿ ಅಸಾಧ್ಯವಾದುದೆಲ್ಲ. ಸಾಧ್ಯವಾಗುತ್ತದೆ. ಕತೆ ಹೇಳುತ್ತೇವೆ ಎಂದರೆ ತುಂಟ ಮಗುವೂ ಓಡಿ ಬಂದು ಕುಳಿತು ಕೊಂಡು ಕೇಳುತ್ತದೆ.

ನಮ್ಮಲ್ಲಿ ಕತೆಗಳಿಗೇನೂ ಕೊರತೆಯಿಲ್ಲ. ಪಂಚತಂತ್ರದ ಕತೆಗಳು, ಧ್ರುವ, ಪ್ರಹ್ಲಾದರಂತಹ ಬಾಲಕರ ಕತೆಗಳು, ಬೀರಬಲ್, ತೆನಾಲಿ ರಾಮ ಕೃಷ್ಣರ ಕತೆಗಳು. ಮಕ್ಕಳಿಗೆ ಇಷ್ಟವಾಗುವಂತಹವು. ಆಯಾ ಪ್ರದೇಶಗಳಲ್ಲಿ ಮಾತ್ರ ಪ್ರಚಲಿತವಾಗಿರು ವಂತಹ ಜಾನಪದ ಕತೆಗಳು ಲೆಕ್ಕವಿಲ್ಲದಷ್ಟು. ಕತೆ ಗಳು ಹೇರಳವಾಗಿ ಇದ್ದರೂ ಅವನ್ನೆಲ್ಲ ಸುವ್ಯವಸ್ಥಿತ ರೀತಿಯಲ್ಲಿ ಕಲೆ ಹಾಕಿ ಅಚ್ಚು ಮಾಡುವ ಕೆಲಸ ನಡೆದಿರಲಿಲ್ಲ. ಏಕೆ ನಡೆದಿರಲಿಲ್ಲ. ಎಂದು ಯೋಚಿಸುವಾಗ ನಮ್ಮ ದೇಶದ ಚಾರಿತ್ರಿಕ ಹಿನ್ನೆಲೆ, ಸಾಮಾಜಿಕ ಪದ್ಧತಿಗಳನ್ನು ಅವಗಾಹನೆಗೆ ತೆಗೆದು ಕೊಳ್ಳಬೇಕಾಗುತ್ತದೆ. ನಮ್ಮಲ್ಲಿ ಶೈಶವಾವಸ್ಥೆ ಯಿಂದ ಇದ್ದಕ್ಕಿದ್ದಂತೆ ಪ್ರೌಢಾವಸ್ಥೆಗೆ ನೂಕುತ್ತಿದ್ದ ಒಂದು ಪದ್ಧತಿ ಬಾಲ್ಯ ವಿವಾಹ, ದೇಶದಲ್ಲಿ ಅಕ್ಷರ ಸ್ಥರ ಸಂಖ್ಯೆ ಕಡಿಮೆ. ಸಾಮಾನ್ಯ ಜನರಿಗೆ ಆಹಾರ ಬಟ್ಟೆಗಳದೇ ದೊಡ್ಡ ಸಮಸ್ಯೆ. ಹೀಗಾಗಿ ಬೆಲೆ ತೆತ್ತು ಪುಸ್ತಕ ಕೊಳ್ಳುವವರ ಸಂಖ್ಯೆ ಕಡಿಮೆ. ರಾಜ್ಯ ಭಾಷೆ ಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪುಸ್ತಕ ಹೊರಬೀಳಲು ಸೀಮಿತ ಮಾರುಕಟ್ಟೆಯ ಅಡ್ಡಿ.

ಆಂಗ್ಲ ಭಾಷೆಯಲ್ಲಿ ಈ ಕ್ಷೇತ್ರದಲ್ಲಿ ನಡೆದಿ ರುವ ಕೆಲಸ ಅಪಾರ. ಹನ್ಸ್ ಕ್ರಿಶ್ಚನ್, ಏಂಡರ್ ಸನ್, ಗ್ರಿಮ್ ಸಹೋದರರ ಕತೆಗಳು ಮಾತ್ರವ ಲ್ಲದೆ ಲೆಕ್ಕವಿಲ್ಲದಷ್ಟು ಮಕ್ಕಳ ಕತೆಗಳು ಎಲ್ಲಾ ವಯಸ್ಸಿನ ಮಕ್ಕಳಿಗೂ ಮನ ತಣಿಯುವಷ್ಟು ಓದಲು ದೊರೆಯುತ್ತವೆ. ಬಣ್ಣ ಬಣ್ಣದ ಚಿತ್ರಗಳು ಉತ್ತಮ ಕಾಗದ, ಓದಲು ಸುಲಭವಾದ ದಪ್ಪ ಅಕ್ಷರಗಳು ಪುಟ್ಟ ಮಕ್ಕಳನ್ನು ಆಕರ್ಷಿಸಿದರೆ, ಸ್ವಲ್ಪ ದೊಡ್ಡವರಿಗೆ ಕಿರುಕಾದಂಬರಿಗಳು, ಸಾಹಸಮಯ ವಾದ ಕತೆಗಳೂ ದೊರೆಯುತ್ತವೆ. ಎನಿಡ್‌ಬ್ಲೈಟನ್‌ರ ಕಿರುಕಾದಂಬರಿಗಳಂತೂ ಮಕ್ಕಳಿಗೆ ಅತಿಪ್ರಿಯ.

ಅಷ್ಟೊಂದು ವ್ಯಾಪಕವಾಗಿ ಅಲ್ಲದಿದ್ದರೂ ನಮ್ಮಲ್ಲೂ ಈಚೆಗೆ ಇಂತಹ ಪ್ರಯತ್ನಗಳು ನಡೆದಿವೆ. ಪೌರಾಣಿಕ, ಹಾಗೂ ಚಾರಿತ್ರಿಕ ಕತೆಗಳನ್ನು ಕಾಮಿಕ್ಸ್ ಗಳಲ್ಲಿ ಬಣ್ಣ ಬಣ್ಣದ ಚಿತ್ರಗಳ ಮೂಲಕ ತಿಳಿಸಿಕೊಡುವ ಪ್ರಯತ್ನ ನಡೆದಿದೆ.

ಮಕ್ಕಳ ಕತೆ ಎಂದಕೂಡಲೆ ನೀತಿಕತೆಗಳು ಅಥವಾ ವೀರರ, ಪುರಾಣ ಪುರುಷರ ಜೀವನ ಚಿತ್ರ ಗಳೇ ಆಗಬೇಕೆಂಬ ಭಾವನೆ ಬೇರೂರಿ ಬಿಟ್ಟಿರುವಂತೆ ತೋರುತ್ತದೆ. ಮಕ್ಕಳ ಕತೆಗಳಲ್ಲಿ ಒಂದು ನೀತಿ ಇರ ಬೇಕಾದದ್ದು ಅವಶ್ಯಕವೆಂದು ಒಪ್ಪಿಕೊಳ್ಳೋಣ.

ವೀರ ಪುರುಷರ, ವಿಜ್ಞಾನಿಗಳ ಚರಿತ್ರೆ ಮಕ್ಕಳ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನು ಬೀರಬಲ್ಲದು. ಆದರೆ ಮಕ್ಕಳಿಗೂ 'ಸಾಮಾಜಿಕ' ಕತೆ ಕಾದಂಬರಿಗಳ ಅವಶ್ಯಕತೆ ಇಲ್ಲವೆ? ಕೊರತೆ ಇರುವುದು ಈ ಕ್ಷೇತ್ರದಲ್ಲಿ. ಮಕ್ಕಳ ನಿತ್ಯಜೀವನದ ಘಟನೆಗಳಿಗೆ ಒಂದು ಕತೆಯ ಮೆರುಗನ್ನು ಕೊಟ್ಟು ಬರೆಯಲು ಸಾಧ್ಯವಿದೆ. ಹಿರಿಯರು ಎಷ್ಟೋ ಕತೆ ಕಾದಂಬರಿಗಳನ್ನು ಓದಿ, 'ಎಲಾ ಇದು ನನ್ನದೇ ಕತೆ ಇದ್ದ ಹಾಗಿದೆಯಲ್ಲಾ' ಎಂದು ಕತೆಯ ಪಾತ್ರಗಳಲ್ಲಿ ತಮ್ಮನ್ನೇ ಕಂಡುಕೊಳ್ಳುತ್ತಾರೆ. ಮಕ್ಕಳೂ ತಮ್ಮದೇ ಎನ್ನುವಂತಹ ಕತೆಗಳನ್ನು ಪಡೆಯಬಾರದೇಕೆ? ಮನರಂಜನೆಯ ಜೊತೆಗೇ ಹಾಸುಹೊಕ್ಕಾಗಿ ಬೆರತಂತೆ ನೀತಿಯೂ ಇದ್ದು ಸುಲಭ ಭಾಷೆಯತರುವಂತಹ ಸಾಹಿತ್ಯ ಹೆಚ್ಚಾಗಿ ಸೃಷ್ಟಿಯಾಗಬೇಕು. ಬರೆಯುವವರು, ಪ್ರಕಾಶಕರು, ದುಡ್ಡು ಕೊಟ್ಟು ಮಕ್ಕಳಿಗೆ ಪುಸ್ತಕವನ್ನು ತೆಗೆದುಕೊಡುವ ತಾಯಿ ತಂದೆಯರು ಎಲ್ಲರೂ ಮನಸ್ಸು ಮಾಡಿದರೆ ಶಿಶು ಸಾಹಿತ್ಯ ವಿಪುಲವಾಗಿ ಬೆಳೆಯಲು ಸಾಧ್ಯ, ಮಕ್ಕಳ ಪುಸ್ತಕ ಭಂಡಾರಗಳು, ಹಾಗೂ ಹಿರಿಯರ ಪುಸ್ತಕ ಭಂಡಾರಗಳಲ್ಲಿ ಮಕ್ಕಳಿಗಾಗಿ ಪ್ರತ್ಯೇಕ ವಿಭಾಗಗಳೂ ಬೆಳೆದರೆ ಮಕ್ಕಳ 'ಪುಸ್ತಕದಾಹ'ವನ್ನು ಸುಲಭವಾಗಿ ಹಿಂಗಿಸಬಹುದು. 'ಓದುವುದು' ಬಹು ಒಳ್ಳೆಯ ಹವ್ಯಾಸ. ಅದನ್ನು ಮಕ್ಕಳಿಗೆ ಕಲಿಸುವುದು, ಕಲಿಸಿದುದನ್ನು ಬೆಳೆಸುವುದು ಹಿರಿಯರ ಕರ್ತವ್ಯ. ಈ ಹವ್ಯಾಸದಿಂದ ಮಕ್ಕಳು ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳುವರಲ್ಲದೆ ಅದಕ್ಕೆ ಉತ್ತೇಜನ ಕೊಡುವುದರಿಂದ ಹಿರಿಯರು ಮಕ್ಕಳ ತುಂಟತನವನ್ನೂ ನಿಯಂತ್ರಿಸಬಹುದು. ಕೆಲಸವಿಲ್ಲದ ಮನಸ್ಸು ಭೂತಗಳ ಆಗರ ಮಕ್ಕಳಲ್ಲಿ ಹಾಗಾಗದಂತೆ ಅವರ ಮನಸ್ಸಿಗೆ ಕೆಲಸವನ್ನೂ ಉಲ್ಲಾಸವನ್ನೂ ಕತೆ ಪುಸ್ತಕಗಳು ನೀಡಬಲ್ಲವು. —

---



# ಯುಗಮಂತ್ರ

—ರಾಶೇಖರ ಭೂಸನೂರಮಠ

ಜ್ಞಾನದೀಪವು ಇಂದು ಶಾಂತವಾಗಿದೆ ನೋಡಿ
ಮಾನವನು ವಿಜ್ಞಾನ ಒಂದಕ್ಕೆ ಒಡನಾಡಿ
ತನ್ನ ಅರಿವನೆ ಮರೆತ ಮಾನವನ ವಿದ್ಯೆಗಳು
ಹೀನ ಸ್ಥಿತಿಗಿಳಿಸಿರುವ ಬಂಧನಗಳು
ನವಯುಗಕೆ ನವಜ್ಞಾನ ತಂದಿರುವೆವು
ಸರ್ವರಿಗೆ ಸಮವಾಗಿ ತಿಳಿಸಿರುವೆವು
ಆತ್ಮವಿದ್ಯೆಯೆ ಮೂಲ ಮಂತ್ರವಾಗಿ
ಮನಸು ಹೃದಯವ ಬಲ್ಲ ಜ್ಞಾನವಾಗಿ
ವಿಜ್ಞಾನಿ-ಸುಜ್ಞಾನಿ ಬಂದಿರುವೆವು
ಅಜ್ಞಾನ ಅಂಧತ್ವ ಕಳಚಿರುವೆವು

† † † †

ಅರ್ಥವಿಲ್ಲದ ಬಾಳ ನೂಕುತ್ತ ನಶಿಸುವನು
ವ್ಯರ್ಥ ಬದುಕಿರುವವನು ಆಧುನಿಕ ಮಾನವನು
ಸಾರ್ಥಕತೆ ಗುರಿಯಿಲ್ಲ, ಪಶುವಿಗೂ ಕೀಳಾಗಿ
ಸ್ವಾರ್ಥಕ್ಕೆ ಪಾಪಕ್ಕೆ ತಾನೆ ಬಲಿಯಾಗಿ.
ಮಾನವನ ಜೀವನವು ದಿವ್ಯವೆಂದು
ದಾನವನ ಜೀವನವ ಅಳಿಯಿರೆಂದು
ಅರಿತು ಬದುಕಿರಿ ಎಂದು ಉಸುರಿರುವೆವು
ಬದುಕಿ ಅರಿಯಿರಿ ಎಂದು ಹಾಡಿರುವೆವು
ಹೊಸ ಜೀವ ಹೊಸ ಉಸಿರು ಬರಿಸಿರುವೆವು
ಬದುಕಿಗೊಂದರ್ಥವನು ಕೊಟ್ಟಿರುವೆವು.

† † † †

ಕಾಲಕಾಲಕೆ ಬೇರೆ ದೇಶದೇಶಕೆ ಬೇರೆ
ಮೂಲೆಮೂಲೆಗೆ ಬೇರೆ ರಾಜಕೀಯದ ಹೋರೆ
ಆಳರಸರಳಿದರೂ ರಕ್ತ ಹೀರುವರಿಲ್ಲಿ
ನಾಳೆಯೋ ನಾಶವಾದೀರಿ ಯುದ್ಧದಲಿ
ಹತ್ತು ಪಂಗಡಗಳನು ಹತ್ತಿಕ್ಕಲು
ಕುಟಿಲ ಕಾರಸ್ಥಾನ ಕಿತ್ತೊಗೆಯಲು
‘ಸರ್ವರಿಗೆ ಸಮಪಾಲು’ ಎಂದಿರುವೆವು
‘ಸರ್ವರಿಗೆ ಸಮ ಬಾಳು’ ತಂದಿರುವೆವು
ವಿಶ್ವರಾಜ್ಯವನೊಂದ ಕಟ್ಟಿರುವೆವು
ಸ್ವರ್ಗವನೆ ತಂದಿಲ್ಲಿ ಇಟ್ಟಿರುವೆವು.

† † † †

ಕನಸುಗಾರರು ನಾವು ಬಂದಿರುವೆವು
ನವಯುಗಕೆ ಒಸಗೆಯನು ತಂದಿರುವೆವು.
ಕಾಳರಾತ್ರಿಯ ಛಾಯೆ ಮಬ್ಬು ಸರಿಯಿತು ನೋಡಿ
ಕಾಲಪುರುಷನ ಅಟ್ಟಹಾಸ ಆರ್ಭಟ ಜೋಡಿ
ಬಾಳ ಬೆಳಗಿಸಿಕೊಳ್ಳಿ ಯುಗಮಂತ್ರ ನೀವ್ ಕೇಳಿ.
ಕೇಳದಿರ ಹಾಡನ್ನು, ಅಂತೆ ಹೇಳಿ.
ಹಾಡಿದೆವು ನಾವಿಂದು ಯುಗ ಮಂತ್ರವ
ಹೂಡಿದೆವು ನಾವಿಂದು ಹೊಸ ತಂತ್ರವ
ಕನಸುಗಾರರು ನಾವು ಬಂದಿರುವೆವು
ನವಯುಗಕೆ ನವಮಂತ್ರ ಜಪಿಸಿರುವೆವು !

† † † †

# ಮಣ್ಣಿನ ಮಕ್ಕಳ ಮೋಜಿನ ಸರಣಿ

ಸಂಗ್ರಹ: ಕೆ. ವಿರೂಪಾಕ್ಷಗೌಡ. ಹಾಡಿದವರು: ಬಣಕಾರು ಕೆಂಚಮ್ಮ, ಕೊಟ್ರಮ್ಮ

ಸಿಡಿಮಿಡಿಗುಟ್ಟುತ, ಮುಡಿಯನಲ್ಲಾಡುತ, ನಂದಿಗೆ ನೀರು ಕುಡುಸುತ ಶಿವ
ರಾಯ ಗಂಗಿ ನಿನ ಕುಲವ ಏನ್ಹೇಳೆ ಈಗ ? ॥

ಕುಲವನ್ನ ಕೇಳಾಕ ಕುಂಬಾರನ ಮಗಳಲ್ಲ ! ಕುಲದಲ್ಲಂಬಿಗರ ಮಗಳಯ್ಯ !
ಗಂಗಿ ತನ್ನ ಕುಲವ ನಿಂತು ಪೇಳ್ಯಾಳೀಗ !

ಬಾರೆಲೆ ಗಂಗಿ ಜಡಿಯೊಳಗೆ ಕೂಡೀಗ ಹೋಗಾನು ಬಾರೆ ಅರಮನಿಗೆ
ಬಂದಾರೆ ಬಂದೇನು ಕುಂದು ಹೊರಲಾರೆ। ಹೆಂಡರು ಮಕ್ಕಳು ನಿನಗುಂಟು ಈಗ!

ಹೆಂಡರು ಇಲ್ಲೆಂದು ಮಕ್ಕಳು ಇಲ್ಲೆಂದು ನಂದಿಯ ಬಡದ ಶಿವರಾಯ
ದೈನ್ಯದಿ ಕರೆದಾನ ಗಂಗೀಯ ಬಾ ಎಂದು

ಬಾಳೆವನದಾಗಿರುವ ಬಾಳುಳ್ಳ ಗಿಳಿಗಳಿರಾ ಹೋಗಿ ಗೌರಿಗೆ ಹೇಳದಿರೆ ಈಗ !
ನಿಂಬಿವನದಾಗಿರುವ ರಂಭುಳ್ಳ ಗಿಳಿಗಳಿರಾ ಹೋಗಿ ಗೌರಿಗೆ ಹೇಳದಿರೆ ಈಗ

ನಂದಿಯ ಏರ್ಕೊಂಡು ಶಿವರಾಯ ಬಂದಾನ "ನೀರು ತಾ ಗೌರಿ" ಅಂದಾನ
ದೇಶದೇಶ ತಿರುಗಿ ಬ್ಯಾಸತ್ತು ನಾ ಬಂದೆ ಸಿರಿಮಾನದ ಗೌರಿ ನೀರು ಕೊಡೆ ಈಗ

ಒಂದು ಗಿಂಡಿ ಕೊಡು ಎಂದ್ರೆ ಎರಡು ಗಿಂಡಿ ತಂದಾಳ ! ಏನಲೇ ಗೌರೀ
ಮನವೆರಡು ?

ಮನವೆರಡು ಆಗಾಕ ಈಗೇನು ಬಂದಾವ ರಾಯ ? ಗಂಗಮ್ಮಗೊಂದು
ನಿಮಗೊಂದು !

ಸಿಡಿಮಿಡಿಗುಟ್ಟುತ ಮುಡಿಯನಲ್ಲಾಡುತ ತಂದಿಯರಮನಿಗೆ ಹೋದಾಳ ಗೌರಾ

ಬಂದಂತ ಗೌರಾಗೆ ಗಿಂಡೀಲೆ ನೀರು ಕುಂದ್ರಾಕಾ ಕ್ಯಾರೆ ಕುರ್ಜಿಯನೀಗ

"ಕುಂದ್ರಾಕ ಬಂದಿಲ್ಲ ನಿಂದ್ರಾಕ ಬಂದಿಲ್ಲ ನನಮ್ಯಾಲ ಗಂಗಿ ತರುತಾನ ಶಿವನೀಗ"
"ತಂದಾರೆ ತರುಲೋಗ ತಂಗೀಯ ಸರಿಯೆನ್ನ ಹೋಗವ್ವಗೌರಾ ಅರಮನಿಗೆ ಈಗ"

ಹಿಡಿದಾಳ ಹಿಡಿ ಅಡಿಕೆ ಬಿಳಿಎಲಿ ಸಿರಿಗೌರಾ ಬಡ ಬಡ ಬಂದಾಳ ತನ್ನರಮನಿಗೀಗ.

# ಗ್ರಹಣವೋ ಸೂರ್ಯಾಪಹರಣವೋ?

— ಎಸ್. ಪಂಕಜ.

ಕೆಲವೇ ವರ್ಷಗಳ ಹಿಂದೆ ನಡೆದ ಸಂಗತಿ; ಆಫ್ರಿಕಾದ ಒಂದು ಭಾಗದಲ್ಲಿ ಏಳು ನಿಮಿಷ ಮತ್ತು ನಾಲ್ಕು ಸೆಕೆಂಡುಗಳ ಕಾಲ ಸೂರ್ಯನ ಬೆಳಕು ಸಂಪೂರ್ಣವಾಗಿ ಮುಚ್ಚಿಹೋಗಿತ್ತು. ಅಂತಹ ಪೂರ್ಣ ಸೂರ್ಯಗ್ರಹಣವು ಬಹಳ ಅಪರೂಪ ಮತ್ತು ಇನ್ನೊಂದು ನೂರೆಪ್ಪತ್ತೇಳು ವರ್ಷ ಸಂಭವಿಸುವುದಿಲ್ಲ. ಇಂತಹ ಅಪೂರ್ವ ಸೂರ್ಯಗ್ರಹಣವನ್ನು ನೋಡಲು ದೇಶದೇಶಗಳಿಂದ ವಿಜ್ಞಾನಿಗಳೂ ಖಗೋಲಜ್ಞರೂ ಹೋಗಿದ್ದರು. ಅಗ–ಲಾಯಿನ್ ಗಾಲಸಿಯಲ್ಲಿಯ ಕೆನ್‌ಯಾನ ಹಳ್ಳಿಯಲ್ಲಿ ಒಂದು ಬಹು ಸ್ವಾರಸ್ಯಕರ ಪ್ರಸಂಗ ಜರುಗಿತು.

ಸೂರ್ಯಗ್ರಹಣಕ್ಕೆ ಎರಡು ವಾರಗಳ ಹಿಂದೆಯೇ ರಾಶಿಜನ, ರಾಶಿ ಟೆಲಿಸ್ಕೋಪ್ಸ್, ಕಾಂಪ್ಯೂಟರ್ಸ್, ಇತ್ಯಾದಿ ಸಮಸ್ತ ಸಲಕರಣೆಗಳನ್ನೂ ತೆಗೆದುಕೊಂಡು ಬಂದು ಅಲ್ಲಿ ನೆಲಸಿಬಿಟ್ಟಿದ್ದರು! ಅಲ್ಲಿಯ ಜನಗಳೋ ಇವಾವುವನ್ನೂ ಜನ್ಮದಲ್ಲೇ ಕಂಡಿರಲಿಲ್ಲ! ಪಾಪ ಅವರುಗಳ ಗಾಬರಿಯನ್ನು ಕೇಳಲೇಬಾರದು! ಸಾಲದ್ದಕ್ಕೆ ಅಲ್ಲಿಯ ಮಂತ್ರವಾದಿ-ವೈದ್ಯರುಗಳು ( Witch Doctors ) ಅವರುಗಳನ್ನು ಬೆದರಿಸಿಬಿಟ್ಟಿದ್ದರು "ಈ ಬಿಳಿಯ ಮನುಷ್ಯರು ಸೂರ್ಯನನ್ನು ಕದಿಯಲಿಕ್ಕೆ ಬಂದಿದ್ದಾರೆ ಹುಶಾರ್! ಅವರು ಕದ್ದಾಗ, ನಿಮ್ಮ ಮಕ್ಕಳೆಲ್ಲ ಸಾಯುವುವು-ತಾಯಂದಿರ ಹಾಲು ಬತ್ತಿ ಹೋಗುವುದು" ಎಂದು!

ಮುಂದೆ ಬಾತ್ಮೀದಾರರ ಬೃಹತ್ ಸೈನ್ಯವೇ ಕಾಲಿಟ್ಟು ಹಳ್ಳಿಯನ್ನೆಲ್ಲ ಆಕ್ರಮಿಸಿತು. ಅವರ ಹಿಂದೆಯೇ ಪ್ರಸಿದ್ಧ ಟೆಲಿವಿಷನ್ ಕಂಪನಿಯೊಂದರ ಜಪಾನಿ ಗುಂಪು ಬಂದಿಳಿಯಿತು. ಆಮೇಲೆ ಫೋಟೋಗ್ರಾಫರುಗಳ ತಂಡ! ಟೆಲಿವಿಶನ್ ಕಂಪೆನಿಯ ಗುಂಪು ಬಂದದ್ದೇ ಅಲ್ಲಿಯುವರಿಗೆ ಹಣ-ಆಹಾರ ಎಲ್ಲದರ ರುಚಿ ತೋರಿಸಿ, ಈ ಸೂರ್ಯ ಗ್ರಹಣಕ್ಕೆ ಅಲ್ಲಿಯವರ ಪ್ರತಿಕ್ರಿಯೆಯನ್ನು ಸೆರೆಹಿಡಿಯುವ, ತಾವೇ ಎಲ್ಲರಿಗಿಂತ ಮುಂಚಿತವಾಗಿ ಫೋಟೋ ಇತ್ಯಾದಿ ತೆಗೆದುಕೊಳ್ಳುವಂತೆ ವ್ಯವಸ್ಥೆಮಾಡಿಕೊಂಡಿತು. ಆಮೇಲೆ ಬಂದವರು, ಮಣಿಗಳು. ಕನ್ನಡಿಗಳು, ಹೊಲಿಯುವ ಸೂಜಿಗಳು, ಹೊಗೆಸೊಪ್ಪು, ಇವನ್ನು ಕೊಟ್ಟು, ತಮ್ಮ ಕ್ಯಾಮರಾಗಳಿಗೆ ಒಲಿಯುವಂತೆ ಅಲ್ಲಿಯವರ ಕೂಡ ಒಪ್ಪಂದ ಮಾಡಿಕೊಂಡರು. ರುಚಿ ತಲೆಗೇರಿದ ಅಲ್ಲಿಯವರು ಹೆಚ್ಚು ಹೆಚ್ಚು ಹಣ ಕೇಳಲು ಆರಂಭಿಸಿದರು. ಬಂದವರು ತಮ್ಮ ಜೊತೆಯಲ್ಲಿ ತಂದಿದ್ದ ಗ್ರ.ಹಣ ಗುಂಡಿಗಳಿಗೆ, ಟ.ಷರಟುಗಳಿಗೆ, ತಮ್ಮ ಚೂರಿ ಇತ್ಯಾದಿಗಳನ್ನು ವಿನಿಮಯ ಮಾಡಿದರು. ಬೆಳ್ಳಗೆ ಮಾಡಿದ ಗುಂಡು ಶಿಲಾರಸದ ಬಂಡೆಗಳನ್ನು ಆಸ್ಟ್ರಿಚ್ ಪ್ರಾಣಿಯ ಮೊಟ್ಟೆಗಳೆಂದು ಮೋಸಮಾಡಿ ಅವರುಗಳ ತಲೆಗೆ ಕಟ್ಟಿದರು. ದಿಢೀರ್ ವಸತಿಗೃಹಗಳಿಗೆ ಪಾನ-ಸಾರಾಯಿಗಳಿಗೆ ಬೆಲೆಯೇರಿಸಿದರು. ಇಷ್ಟಾದರೂ ಅಲ್ಲಿಯವರ ಮನಸ್ಸಿನಲ್ಲಿ ಪುಕಪುಕ!

ಆ ನೀಳ ಟೆಲಿಸ್ಕೋಪುಗಳು ಸೂರ್ಯನತ್ತ ಗುರಿ ಇಡಲ್ಪಟ್ಟಿರುವ ಬಂದೂಕಗಳಂತೆ ಕಂಡು ಬಂದವು ಅಲ್ಲಿಯವರ ಕಣ್ಣುಗಳಿಗೆ! ಬಂದವರಿಂದ ಹೀಗೆಲ್ಲ ತಾವು ವಸೂಲಿ ಮಾಡಿದ್ದರಿಂದ ಕುಪಿತಗೊಂಡ ಆ ಬಿಳಿಯ ಮನುಷ್ಯರು ತಮ್ಮ ಸೂರ್ಯನನ್ನು ಗುಂಡ.ಹೊಡಿದು ಕೆಡವಿ ಬಿಡುವರೇನೋ? ಕೆಡವಿ ತೆಗೆದು ಕೊಂಡು ಹೋಗಿಬಿಡುವರೇನೋ?

ಹಾಗೆ ಗುಂಡು ಹಿಡಿದು ಕೆಡವಿದಾಗ ಕತ್ತಲಾದಾಗ, ತಮ್ಮ ನ್ನೆಲ್ಲ ಕೊಂದುಬಿಡುವರೇನೋ? ಹಾಗಾಗಬಾರದೆಂದು ಅಲ್ಲಿಯುವರು ಒಂದು ದಿಢೀರ್ ಹೋಮ್‌ಗಾರ್ಡನ್ನು ಕೂಡಿಸಿದರು. ಕೆಟ್ಟ ಮನುಷ್ಯರನ್ನು ಭಯಪಡಿಸಿ ಓಡಿಸಲು ಕಂದುಬಣ್ಣದ ತಲೆಯನ್ನು ಅವರುಗಳಿಗೆ ಮಾಡಿ- ಕೆರಗಳಲ್ಲಿ ಚೂರಿಯಿಟ್ಟು, ಮೈಯೆಲ್ಲ ಕಣ್ಣಾಗಿರುವಂತೆ ಎಚ್ಚರಿಸಿದರು.

ಆ ಭಯಂಕರ ದಿವಸ ಬಂತು! ಅಂದು ಆ ಹಳ್ಳಿಯವರನ್ನು ನೋಡಬೇಕಿತ್ತು! ಮಧ್ಯಾಹ್ನ ನಾಲ್ಕು ಗಂಟೆಗೆ ಸಂಪೂರ್ಣ ಗ್ರಹಣ, ಇಪ್ಪತ್ತು ಸೆಕೆಂಡುಗಳಿಗೂ ಮುಂಚಿಯೇ ಮೋಡಗಳೆಲ್ಲ ಮಾಯವಾದವು; ಆಕಾಶದಲ್ಲಿ ವಿಚಿತ್ರ ಕತ್ತಲೆ ಮೂಡಿತು. ಇಗ್ಗೋ, ಸೂರ್ಯನ ಅಪಹರಣ ಆರಂಭವಾಯಿತು! ಅಲ್ಲಿಯವರು ಗುಸುಗುಸು ಮಾತನಾಡಿಕೊಂಡರು.

ಹೆಂಗಸರು ಅವಸರವಾಗಿ ತಮ್ಮ ಮಕ್ಕಳನ್ನು ಎತ್ತಿಕೊಂಡು ಓಡಿಹೋಗಿ ತಮ್ಮ ಗುಡಿಸಲುಗಳನ್ನು ಸೇರಿಕೊಂಡರು ಭದ್ರವಾಗಿ ಬಾಗಲುಗಳನ್ನು ಬಂದ್ ಮಾಡಿದರು. ಕೆಲವೇ ಗಂಡಸರು ಅಂಜುತ್ತಾ ಹೊರಗೆ ಕಾವಲಾಗಿ ನಿಂತರು. ಕುತೂಹಲಶಮನಕ್ಕಾಗಿ ಹೊರಗೆ ಹೋಗಿದ್ದ ಹೆಂಗಳೆಯರು ಯಾವುದೋ ಪಿಶಾಚಿಯಿಂದ ತಪ್ಪಿಸಿಕೊಳ್ಳುವಂತೆ ತಮ್ಮ ತಲೆಯನ್ನು ಸಂಪೂರ್ಣವಾಗಿ ಮುಚ್ಚಿಕೊಂಡು, ಓಡಿ ಓಡಿ ನಡೆದರು ತಮ್ಮ ತಮ್ಮ ನಿವಾಸಗಳಿಗೆ. ಕೆಲ ಗಂಡಸರು ಬಿಳಿಯ ಮನುಷ್ಯರ ಕೈಹಿಡಿದುಕೊಂಡರು ಆತ್ಮರಕ್ಷಣೆಗೆ. ನೈರೋಬಿಯ ಹತ್ತಿರದ ಒಬ್ಬಾತ ಜಗತ್ತೇ ನಾಶವಾಗುತ್ತಿದೆಯೆಂದು ತಿಳಿದುಕೊಂಡು ನೇಣುಹಾಕಿಕೊಂಡನು.

ಕತ್ತಲು ಹರಡಿತು—ಆದರೆ ರಾತ್ರಿ ಕತ್ತಲಲ್ಲ ಪೂರ್ಣ ಚಂದ್ರನ ಕತ್ತಲು. ಸುತ್ತಮುತ್ತೆಲ್ಲ ಏನೋ ಕಾಣುತ್ತಿತ್ತು. – ಆದರೆ ಹಗಲಲ್ಲೇ ಈ ಕತ್ತಲೆಯೆಂದರೆ!

ಗ್ರಹಣಬಿಟ್ಟಾಗ ಪಕ್ಷಿಗಳೂ ಬಾಯಿಬಿಟ್ಟವು. ಅವುಗಳ ಗಾನ ಸುಖ ಸಂದೇಶ ಊದಿತು. ಆದರೂ, ಅದರಲ್ಲೂ ಹೆಂಗಸರು ಒಳಗೆ ಕೂತೇ ಇದ್ದರು. ಹೊರಗೆ ಅವರುಗಳು ಬರಬೇಕಾದರೆ ಬಹು ಕಾಲವೇ ಬೇಕಾಯಿತು. ಒಬ್ಬೊಬ್ಬರಾಗಿ ಹೊರಬಂದ ಅವರುಗಳು ಮೊದಲು ಆತಂಕದಿಂದ ಆಗಸದತ್ತ ನೋಡಿದರು, ಸಮಾಧಾನ ವಿಸ್ಮಯಭರಿತ ಉಸಿರೆಳೆದುಕೊಂಡರು. ಅವರ ಸೂರ್ಯ ಮಾಮೂಲು ಸ್ಥಳದಲ್ಲೇ ಇತ್ತು! ಅದರ ಗಾತ್ರ ಅಷ್ಟೇ ಇತ್ತು! ಅದರ ಬೆಳಕು ಹಾಗೇ ಇತ್ತು! ಸದ್ಯ ಯಾವ ಬಿಳಿಯ ಮನುಷ್ಯನೂ ಅವರ ಸೂರ್ಯನನ್ನು ಕದ್ದಿರಲಿಲ್ಲ!

ಸೂರ್ಯನ ಈ ಪುನರ್ಜನ್ಮದ ಪುಣ್ಯದಿನವನ್ನು ಆಚರಿಸಲು ಅಲ್ಲಿಯವರು ಔತಣ ಮಾಡಿದರು–ಹಾಡು ಹೇಳಿದರು–ನರ್ತಿಸಿದರು. —

---

# ವಚನ ಸುಧೆ

— 'ಪುಲಕೇಶಿ'

ಅಭಯವೆಂಬುದು ಸಂಸಾರಾರ್ಣವ ದಾವಾನಲವಯ್ಯಾ;
ಅಭಯವೆಂಬುದು ನಿಜಧೈರ್ಯ ಸಂಪತ್ತಿಯಯ್ಯ;
ಅಭಯವುಳ್ಳಾತಂಗೆ ಭೂಮಿಕಂಪಿಸಿದರೇನು?
ಅಭಯವುಳ್ಳಾತಂಗೆ ಸಿಡಿಲು ಬಂದೆರಗಿದರೇನು?
ಉಭಯವನಳಿಗಳೆಯುವನಕ 'ಅಭಯ' ಪ್ರಾಪ್ತಿ
ಯಾಗದಯ್ಯಾ ಶ್ರೀ ಗುರು ಸಿದ್ಧಗಂಗಾ ಶಿವಕುಮಾರ ವಿಭು

ಆನಾರೆಂದು ವಿಚಾರಿಪುದೇ ಮಾನವ ಜೀವನದ ಕೀಲಿಯಯ್ಯಾ;
ಆನಾರೆಂದು ವಿಚಾರಿಸಲೆಂದೇ ಈ ಭುವಿಗೆ ಬಂದಿರುವುದಯ್ಯಾ;
ಆನಾರೆಂದು ಅರಿವುದೇ ನಿಜಗುರುಕೃಪೆಯಪ್ಪುದಯ್ಯಾ;
ಆನಾರೆಂದು ಅರಿಯಲೆಳಸದೆ ಬಾಳಿದರೆ, ಕೋಣನಿಗಿಂತ
ಕರಕಷ್ಟ ಮಾನವ ಜೀವಿತ ಶ್ರೀ ಗುರು ಸಿದ್ಧಗಂಗಾ ಶಿವಕುಮಾರವಿಭು.

# ಪ್ರಾರ್ಥನೆಯ ಮಹತ್ವ

—ಕೆ. ಗುರುಲಿಂಗಶಾಸ್ತ್ರಿ

ಈಗ ನಾವು ವೈಜ್ಞಾನಿಕ ಯುಗದಲ್ಲಿ ಜೀವಿಸುತ್ತಿದ್ದೇವೆ. ಪ್ರಕೃತಿಯ ವ್ಯವಹಾರಗಳೆಲ್ಲಾ ಕೆಲವು ನಿಯಮಗಳಿಗೊಳಪಟ್ಟು ನಡೆಯುತ್ತಿರುವುವೆಂದು ನಮ್ಮ ಭಾವನೆ. ಇಂಥ ಕಾಲದಲ್ಲಿ ಪ್ರಾರ್ಥನೆಗೆಂದಾದರೂ ಇಂಬು ದೊರೆಯುವುದು ಶಕ್ಯವೇ ? ಬುದ್ಧಿಪ್ರಾಧಾನ್ಯರು ಪ್ರಾರ್ಥನೆಯು ಏನೋ ಒಂದು ಭಾವುಕತನದ ಹುಚ್ಚೆಂದೂ, ಅದು ಕೇವಲ ಅಜ್ಞಾನಿಗಳ ಹಾಗೂ ಮೂರ್ಖರ ಸೊತ್ತೆಂದೂ ತಿಳಿಯುವರು. ಇಂಥ ಪರಿಸ್ಥಿತಿಯಲ್ಲಿ ನಾವು ಪ್ರಾರ್ಥನೆಯು ಮಹತ್ವವಾದದ್ದೆಂದೂ, ಅದರಲ್ಲಿ ಅಪಾರವಾದ ಶಕ್ತಿ ಇರುವುದೆಂದೂ, ಪ್ರತಿಪಾದಿಸಿದರೆ ಶಾಸ್ತ್ರೀಯ ಬುದ್ಧಿಯುಳ್ಳವರಿಗೆ ಇದೊಂದು ವಿಕಟ ವಿನೋದವಾಗಿ ತೋರಲಿಕ್ಕಿಲ್ಲವೆ ? ಪ್ರಾರ್ಥನೆ ಮಾಡುವುದು ಸಂಸ್ಕೃತಿಹೀನರಾಗಿದ್ದ ಹಿಂದಿನ ಕಾಲದ ಕಾಡು ಜನರ ಸಂಪ್ರದಾಯವಿದ್ದು ಈಗಿನ ಸುಧಾರಣಾ ಶತಮಾನದ ಜನರು ಅನುಸರಿಸುವುದು ಹುಚ್ಚುತನವೆಂದು ಶಾಸ್ತ್ರೀಯ ಮತೀಯರು ಪ್ರತಿಪಾದಿಸುವರು. ಆದರೆ ನಾವು ಸ್ವಲ್ಪ ಆಳವಾಗಿ ವಿಚಾರಿಸಿದರೆ ಪ್ರಾರ್ಥನೆಯು ಮಾನವ ಜೀವನೋದ್ಧಾರಕ್ಕೆ ಅತ್ಯವಶ್ಯಕವಾದ ಉಪಾಯವೆಂದೂ ಪ್ರಾರ್ಥನೆಯನ್ನು ಬಿಟ್ಟರೆ ಮಾನವನ ಜೀವನದ ಕಳೆಯೇ ಕಾಂತಿಹೀನವಾಗುವುದೆಂದೂ ನಾವು ನಿರ್ವಿವಾದವಾಗಿ ಹೇಳಬಹುದು. ನಮ್ಮನ್ನು ಹುಟ್ಟಿಸಿ ಸಾಕಿ ಸಲಹುವ ಪರಮಾತ್ಮನನ್ನು ನಾವು ಆನಂದದಿಂದ ಕೈಯೆತ್ತಿ ಪ್ರಾರ್ಥಿಸದಿದ್ದರೆ ನಮ್ಮ ಜೀವಿತವು ಪಶುಪಕ್ಷಿಗಳಿಗಿಂತ ಕೀಳಾಗುವುದು. ಅಂದರೆ ನಾವು ಕನಸು ಮನಸಿನಲ್ಲಿಯೂ ಸಹ ಮಾಡಲು ಶಕ್ಯವಾಗದ ಕಾರ್ಯಗಳು ಪ್ರಾರ್ಥನೆಯಿಂದ ಘಟಿಸುತ್ತವೆ. ಆದ್ದರಿಂದ "ಹಗಲಿರುಳೂ ಪರಮಾತ್ಮನ ದಿವ್ಯ ನಾಮೋಚ್ಚಾರಣೆ ಮಾಡುವುದಕ್ಕಾಗಿ ನಿನ್ನ ನಾಲಿಗೆಯು ಕಾರಂಜಿಯಂತೆ ಪುಟಿಯುತ್ತಿರಲಿ. ನಾವು ದೇವರನ್ನು ಅರಿತು ಆತನನ್ನು ಕೈಯೆತ್ತಿ ಪ್ರಾರ್ಥಿಸದಿದ್ದರೆ ನಮ್ಮ ಜೀವನವು ಕುರಿ ಆಡು ಮೊದಲಾದ ಕೀಳು ಪಶುಗಳಿಗಿಂತಲೂ ಕಡೆಯಾಗುವುದು" ಎಂಬುದಾಗಿ ಮಹಾತ್ಮ ಗಾಂಧಿಯವರು ತಿಳಿಸಿರುತ್ತಾರೆ, ದೇಹಕ್ಕೆ ಆಹಾರವು ಅತ್ಯಾವಶ್ಯಕವಾಗಿರುವಂತೆ ಪ್ರಾರ್ಥನೆಯು ಮನಸ್ಸಿಗೆ ಆಹಾರವೆನಿಸುತ್ತದೆ. ಮನುಷ್ಯನು ಆಹಾರವಿಲ್ಲದೆ ಅನೇಕ ದಿವಸಗಳವರೆಗೆ ಜೀವಿಸಬಹುದು. ಆದರೆ ದೇವರಲ್ಲಿ ನಿಜವಾದ ನಂಬಿಕೆಯಿದ್ದವನು ಪ್ರಾರ್ಥನೆಯನ್ನು ಬಿಟ್ಟು ಅರೆ ನಿಮಿಷವಾದರೂ ಜೀವಿಸಿರುವುದು ಶಕ್ಯವಿಲ್ಲ. ನಾವು ಈ ಜಗತ್ತಿನಲ್ಲಿ ಪ್ರಾರ್ಥನೆಯಕಡೆ ಗಮನ ಕೊಡದಿದ್ದರಿಂದಲೇ ಮೇಲಿಂದ ಮೇಲೆ ಕದನ, ಕಾಳಗ, ಹೋರಾಟಗಳಿಗೆ ಬಲಿ ಬೀಳುವೆವು. ಅನೇಕ ಜನ ಹಿಂದೂ ಮುಸಲ್ಮಾನ ಕ್ರಿಸ್ತ ಜನರು ತಮ್ಮ ತಮ್ಮೊಳಗೆ ಜಗಳವಾಡುತ್ತಿರುವುದನ್ನು ನೀವು ಕೇಳಿರಬಹುದು. ಅದಕ್ಕೆ ಕಾರಣ ಅವರು ತಮ್ಮ ಪ್ರಾರ್ಥನೆಯನ್ನು ಕೇವಲ ತುಟಿಯಿಂದ ಮಾಡುವರೇ ಹೊರತು ಹೃತ್ಪೂರ್ವಕವಾಗಿ ಮಾಡುತ್ತಿರುವುದಿಲ್ಲ. ಡಂಭಾಚಾರದ ಪ್ರಾರ್ಥನೆಯಿಂದ ದೇವರು ಒಲಿಯುವುದಿಲ್ಲ. ನಮ್ಮ ಹೃದಯ ಪ್ರಾರ್ಥನೆಯಿಂದ ಉಕ್ಕಿ ಉಕ್ಕಿ ಹೊರಸೂಸಿದರೆ ಅಂಥ ಪ್ರಾರ್ಥನೆಗೆ ದೇವರು ಒಲಿವನು. ಅಂದರೆ ಯಾವಾತನು ಮನುಷ್ಯ ಪಶುಪಕ್ಷ್ಯಾದಿಗಳನ್ನು ಅಂತಃಕರಣ ಪೂರ್ವಕವಾಗಿ ಪ್ರೀತಿಸುವನೋ ಆತನೇ ನಿಜವಾದ ಪ್ರಾರ್ಥನೆಗೆ ಅಧಿಕಾರಿಯು. ವಿಶ್ವಪ್ರೇಮವೆಂಬುದೇ ಪ್ರಾರ್ಥನೆಯ ತಾತ್ಪರ್ಯವು ಮಹರ್ಷಿಯರು ಪ್ರಾರ್ಥನೆಯ ತತ್ವವನ್ನು ಜಗತ್ತಿಗೆ ಹರಡಿರುವರು. ದೇವರನ್ನು ನಮ್ಮ ಸುಖ ದುಃಖಗಳಿಗೆ ಪ್ರಾರ್ಥಿಸುವುದು ಸರಿಯಲ್ಲ; ದೇವರೇ ನನಗೆ ಐಶ್ವರ್ಯವನ್ನು ಕೊಡು, ಮಕ್ಕಳ ಫಲವನ್ನು ಕೊಡು, ನಿನಗೆ ಸಹಸ್ರ

ನಾವು ಪಾರಾಯಣ ಮಾಡಿಸುವೆನು, ರುದ್ರಾಭಿಷೇಕ ಮಾಡುವೆನು, ಎಂದು ಪ್ರಾರ್ಥಿಸುವುದು ನಿಜವಾದ ಪ್ರಾರ್ಥನೆಯಲ್ಲ. ಅಂಥ ವ್ಯಾಪಾರಿ ಪ್ರಾರ್ಥನೆಗೆ ದೇವರು ಮೆಚ್ಚಲಾರ. ದೇವರು ರೊಕ್ಕ ತೆಗೆದು ಸಾಮಾನುಗಳನ್ನು ಕ್ರಯಕ್ಕೆ ಕೊಡುವ ಶೆಟ್ಟಿಯಲ್ಲ. ಆತನ ಸಂಬಂಧದ ನಾಮ, ರೂಪು, ಕ್ರಿಯೆ, ಮಂತ್ರತಂತ್ರ ತಪಸ್ಸುಗಳನ್ನಾಚರಿಸಿದರೆ ಪರಮಾತ್ಮನು ಎಂದಿಗೂ ಆನಂದ ಪಡಲಾರನು. ಪರಮಾತ್ಮನು ಸೃಷ್ಟಿಯ ವ್ಯವಹಾರಗಳನ್ನು ನಿಯಮಬದ್ಧವಾದ ರೀತಿಯಲ್ಲಿ ಸಾಗಿಸಿಕೊಂಡು ಹೋಗುತ್ತಿರುವನು. ಅವು ಪರಮಾತ್ಮನ ಇಚ್ಛಾನುಸಾರವಾಗಿ ಕಾಲಕ್ರಮದಿಂದ ವ್ಯತ್ಯಾಸ ಹೊಂದುವುವು. ನಮಗೆ ಅನಂತ ಉಪಕಾರಗಳನ್ನು ಮಾಡಿದ ಪರಮಾತ್ಮನಿಗೆ ನಾವು ಅಂತಃಕರಣಪೂರ್ವಕವಾಗಿ ಕೃತಜ್ಞತಾಭಾವವನ್ನು ವ್ಯಕ್ತಗೊಳಿಸುವುದು ನಿಜವಾದ ಪ್ರಾರ್ಥನೆಯು. ನಮ್ಮ ಅಂತರಾತ್ಮನನ್ನು ಪರಮಾತ್ಮನ ಸೌಂದರ್ಯಮಯ ರಾಶಿಯಲ್ಲಿ ಒಂದುಗೂಡಿಸಿ ಬಿಡುವುದು ನಿಜವಾದ ಪ್ರಾರ್ಥನೆ. ಬೇರೆ ಬಾಹ್ಯ ದೃಷ್ಟಿಯಲ್ಲಿ ಪರಮಾತ್ಮನ ಸಾನ್ನಿಧ್ಯದಲ್ಲಿ ನಾವು ನಮ್ಮ ದೃಷ್ಟಿಕೋನವನ್ನು ಅಂತರ್ಮುಖಗೊಳಿಸಿದರೆ ನಮ್ಮಲ್ಲಿಯೇ ಆ ಪರ ವಸ್ತುವಿನ ಪರಂಧಾಮವು ನೆಲೆಸಿದ್ದು ನಮಗೆ ಗೋಚರವಾಗುವುದು. ನಮ್ಮ ಜೀವಾತ್ಮನನ್ನು ನಮ್ಮ ಅಂತರಂಗದಲ್ಲಿ ನೆಲಸಿದ ಪರಮಾತ್ಮನೊಡನೆ ಬೆರೆಸಿ ಲೋಲಾಡುವುದೇ ನಿಜವಾದ ಪ್ರಾರ್ಥನೆಯ ರಹಸ್ಯವು. ನಾವು ಮಾಡುವ ಕೆಲಸವನ್ನು ಶಿವಾರ್ಪಣ ಬುದ್ಧಿಯಿಂದ ಮಾಡಿ ಆ ಕೆಲಸವನ್ನು ತಮ್ಮ ಆರಾಧ್ಯ ದೇವತೆಗೆ ವಿಶದಪಡಿಸುವುದು ನಿಜವಾದ ಪ್ರಾರ್ಥನೆಯೆಂದು ಕರೆಯಲ್ಪಡುತ್ತದೆ. ಪ್ರಾರ್ಥನೆಯಲ್ಲಿ ಮನಸ್ಸಿಗೆ ದಿವ್ಯ ಸ್ಫೂರ್ತಿಯನ್ನುಂಟುಮಾಡುವ ಸಾಮರ್ಥ್ಯವಿದೆ. ಶಾರೀರಿಕ ಹಾಗೂ ಮಾನಸಿಕ ವ್ಯಥೆಗಳನ್ನು ನೀಗಿಸಿಕೊಳ್ಳಲು ಪ್ರಾರ್ಥನೆಯು ಉತ್ತಮೋಪಾಯವಾಗಿದೆ. ಶರೀರಕ್ಕೂ ಮನಸ್ಸಿಗೂ ವಿಶೇಷ ಸಂಬಂಧವಿರುವುದರಿಂದ ಮಾನಸಿಕ ಪ್ರಾರ್ಥನೆಯು ಶರೀರದ ಮೇಲೆ ಪರಿಣಾಮವನ್ನುಂಟುಮಾಡುವುದು. ನಾವು ಶಾರೀರಿಕ ವಿಷಯಗಳ ಸಂಬಂಧವಾಗಿ ದೇವರನ್ನು ಬೇಡಿಕೊಳ್ಳುವಾಗ ಶಾರೀರಿಕ ನಿಯಮಗಳನ್ನು ಮೀರಿ ಏನನ್ನೂ ಕೇಳಲಾಗದು; ಮೀರಿದರೆ ನಮಗೆ ಪಾಪ ಘಟಿಸುವುದು. ಅವನು ಒಳ್ಳೆಯ ಉದಾತ್ತ ಜೀವನದ ತವನಿಧಿಯಾಗಿರುವನು. ಆತನಿಂದಲೇ ನಾವು ಕಾಲಕಾಲಕ್ಕೆ ಶ್ರದ್ಧಾ ಪ್ರಾರ್ಥನೆಗಳ ಮುಖಾಂತರವಾಗಿ ಸ್ಫೂರ್ತಿಯನ್ನು ಪಡೆದುಕೊಳ್ಳುತ್ತಾ ನಮ್ಮ ಜೀವನಕ್ಕೆ ಹರವುಗೊಟ್ಟ ಅದನ್ನು ಉದಾತ್ತಗೊಳಿಸುತ್ತ ಸಾಗುವುದು. ನಾವು ದೈನ್ಯದಿಂದ ಪರಮಾತ್ಮನನ್ನು ಪ್ರಾರ್ಥಿಸಿದರೆ ಆತನು ನಮ್ಮ ಕೈಹಿಡಿದು ನಮ್ಮನ್ನು ಸನ್ಮಾರ್ಗಕ್ಕೆ ತಂದು ಹಚ್ಚುವನೆಂಬುದರಲ್ಲಿ ಎಳ್ಳಷ್ಟೂ ಸುಳ್ಳಿಲ್ಲ. “ಉತ್ತಿಷ್ಠತ; ಜಾಗ್ರತ ಪ್ರಾಪ್ಯವರಾನ್ನಿಬೋಧತ” ಎಂಬುದಾಗಿ ಯಾವಾಗಲೂ ನಮ್ಮ ಅಂತರಂಗದ ಧ್ವನಿಯು ಎಚ್ಚರಿಕೆಯನ್ನು ಕೊಡುತ್ತಿರುತ್ತದೆ. ನಮ್ಮ ಪ್ರಾರ್ಥನೆಯು ಈ ಧ್ವನಿಗೆ ಕಿವಿಗೊಡುವಂತೆ ನಮ್ಮ ಹೃದಯ ದ್ವಾರವನ್ನು ತೆಗೆದು ಬಿಡುತ್ತದೆ. “ಧರೆಯ ಸುಖದ ಭೋಗವೆನಗೆ ಹರಿದು ಹೋಗಲಯ್ಯ; ನಿಮ್ಮ ಚರಣಕಮಲದಲ್ಲಿ ಮನವು ಮಗ್ನವಾಗಲಯ್ಯ ಎಂಬೀ ಮುಪ್ಪಿನ ಷಡಕ್ಷರೀದೇವರ ಪಾರ್ಥನೆಯು ನಿಷ್ಕಾಮ ಭಕ್ತಿಯ ಪಾಠವನ್ನು ಬೋಧಿಸುತ್ತದೆ. ಪರಮಾತ್ಮನ ಕರುಣೆಗೆ ಹಂಬಲಿಸುವ ವಿಷಯದಲ್ಲಿ “ಬಡ ಪಶು ಪಂಕದಲ್ಲಿ ಬಿದ್ದರೆ ಕಾಲ ಬಡಿವುದಲ್ಲದೆ, ಬೇರೆಗತಿಯುಂಟೆ? ಶಿವಾಶಿವಾ ಹೋದಿಹ ಹೋದಿಹೆನಯ್ಯ ನಿಮ್ಮ ಮನದತ್ತಲೆನ್ನ ತೆಗೆಯಯ್ಯ; ಪಶು ನಾನು ಪಶುಪತಿ ನೀನು ತುಡುಗುಣಿಯೆಂದೆನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯದಂತೆ ಮಾಡು ಕೂಡಲ ಸಂಗಮದೇವಾ” ಎಂಬುದಾಗಿ ಬಸವೇಶ್ವರರ ಪ್ರಾರ್ಥನೆಯ ಪ್ರಭಾವದ ಸತ್ವವನ್ನು ಸಾವಧಾನವಾಗಿ ಅರಿತುಕೊಳ್ಳುವುದೇ ಅರಿವುಳ್ಳ ಮಾನವನ ಮಹತ್ಕಾರ್ಯದಲ್ಲಿ ಮೊದಲನೆಯದಾಗಿರುವುದು ಜಗದ್ವಂದ್ಯನಾದ ಭಕ್ತಿಭಂಡಾರಿ ಬಸವೇಶ್ವರ ಸಂಗಮೇಶನಲ್ಲಿ ಲಿಂಗೈಕ್ಯನಾದುದು ಪ್ರಾರ್ಥನೆಯ ಬಲದಿಂದ. ಷಟ್‌ಸ್ಥಲಜ್ಞಾನಮೂರ್ತಿಯಾದ ಚನ್ನಬಸವೇಶ್ವರರು ಸಾಕ್ಷಾತ್ಕಾರವನ್ನು ಹೊಂದಿದುದಾದರೂ ತಮ್ಮ ಧ್ಯಾನಮಹಿಮೆಯ ಮಹತ್ವದಿಂದಲೇ. ಆದ್ದರಿಂದಲೇ ಪ್ರಾರ್ಥನೆ ನಮ್ಮ ಜನ್ಮ ಸಾಫಲ್ಯಕ್ಕೆ ಅತ್ಯುಪಯುಕ್ತ ಸಾಧನ

—

# ಧರ್ಮ ಕೇಂದ್ರಗಳ ಪಾತ್ರ

— ಕೆ. ಎಂ. ರೇವಣ್ಣ.

ಮಾನವನು ಬದುಕಿನ ಎಲ್ಲ ಮುಖಗಳಲ್ಲಿಯೂ ಧರ್ಮವನ್ನು ಅಳವಡಿಸಿಕೊಂಡಿದ್ದಾನೆ. ಅದು ಸಂಸ್ಕೃತಿಯ ಅಂದರೆ ತನ್ನ ನಡೆನುಡಿಯ ಅವಿಭಾಜ್ಯ ಅಂಗವಾಗಿ ಬಾಳಿನುದ್ದಕ್ಕೂ ಉಳಿದು ಬೆಳೆದು ಬರುವಂತಹದು. ಧರ್ಮದ ನಿರೂಪಣೆಗೆ ಬೇಕಾದ ಪ್ರಮುಖ ಮಧ್ಯಮಗಳು ಹಲವಿವೆ. ಅವುಗಳಲ್ಲಿ ಧರ್ಮ ಸಂಸ್ಥೆಗಳು ಮುಖ್ಯಪಾತ್ರವನ್ನು ವಹಿಸಿವೆ. ಜನರಲ್ಲಿ ಧಾರ್ಮಿಕ ಪ್ರಜ್ಞೆಯು ಬಹುರೂಪತ್ವವಾಗಿ ಹರಿದು ಬರಬೇಕಾದ ಮೂಲ ಈ ಧರ್ಮ ಕೇಂದ್ರಗಳೆಂದು ಹೇಳಿದರೆ ತಪ್ಪಾಗಲಾರದು. ಇಂತಹ ಕೇಂದ್ರಗಳನೇಕವು ಇಂದು ನಿಶ್ಚೇತನವಾಗಿವೆ. ಇದಕ್ಕೆ ಕಾರಣ ಉದಾಸೀನ ಮನೋಭಾವವನ್ನು ತಳೆದಿರುವ ನಮ್ಮ ಹಿರಿಯರೆಂದು ಒಪ್ಪಿಕೊಳ್ಳಬಬುದು. ಆದಕ್ಕಾಗಿ ಇಂತಹ ಧರ್ಮ ಕೇಂದ್ರಗಳನ್ನು ಉತ್ಸುಕರಾದ ಇಂದಿನ ಯುವ ಜನಾಂಗಕ್ಕೆ ಒಪ್ಪಿಸಿ ಜಾಗೃತಿ ಹಾಗೂ ಜವಾಬ್ದಾರಿಗಳನ್ನು ಮೂಡಿಸಿದ್ದೇ ಆದರೆ ಪುನಶ್ಚೇತನಗೊಳಿಸಲು ಸಾಧ್ಯವಿದೆ. ಮತ್ತು ಅವರ ಸ್ವಶಕ್ತಿ ಸಾಮರ್ಥ್ಯಗಳನ್ನು ಈಮೂಲಕವಾಗಿ ಸದುಪಯೋಗ ಮಾಡಿಕೊಳ್ಳಬಹುದಾಗಿದೆ.

ಬದಲಾಗುತ್ತಿರುವ ಸಾಮಾಜಿಕಪ್ರಜ್ಞೆ ಬದುಕಿನ ರೀತಿ ನೀತಿಗಳ ಕಾರಣದಿಂದಾಗಿ ಇಂದು ದಿನ ನಿತ್ಯದಲ್ಲಿ ಆಚರಣೆಯಲ್ಲಿರುವ ಅನೇಕ ಕೃತಿಗಳಿಗೆ ಪರಂಪರಾನುಗತವಾಗಿ ಬಂದ ಅಭ್ಯಾಸ ಅನುಕರಣೆಯ ವಿನಃ ಮತ್ತಾವ ಅರ್ಥವೂ ಕಾಣದಾಗಿದೆ. ಇದು ತೀರ ಅಸಹಜ ಎನಿಸುತ್ತದೆ. ಪ್ರತಿಯೊಂದಕ್ಕೂ ಏನಾದರೊಂದು ಅರ್ಥ ಇದೆ. ಅದನ್ನು ಅರಿತು ನಡೆಯುವ ಪ್ರಜ್ಞೆ ಎಷ್ಟು ಮುಂದಿಗಿದೆ? 'ಹೀಗೇಕೆ?' ಎಂದು ಪ್ರಶ್ನಿಸುವ ಎಳೆಯರಿಗೆ ಅರಿವಾಗುವಂತೆ ಅರ್ಥೈಸುವ ಎದೆಗಾರಿಕೆ, ಬುದ್ಧಿವಂತಿಕೆ ಇಲ್ಲದ ಹಿರಿಯರು "ಇದು ಹಿಂದಿನ ಹಿರೀಕರು ಮಾಡಿಟ್ಟ ಸಂಪ್ರದಾಯ ಧರ್ಮ, ಅದರಂತೆ ನಡೆಯಬೇಕು, ಪ್ರಶ್ನಿಸಲ್ಲದು" ಎಂಬ ಹಾರಿಕೆಯ ಮಾತು ಹೇಳುವುದನ್ನು ಬಿಟ್ಟರೆ ಮತ್ತಾವ ಪರಿಹಾರವನ್ನೂ ಹುಡುಕಲಾರದಷ್ಟು ನಿಸ್ಸತ್ವರಾಗಿದ್ದಾರೆ. ತಿಳಿಯದ್ದನ್ನು ತಿಳಿದು ಕೊಳ್ಳಲು ಹಂಬಲಿಸಿದರೂ ಸರಿಯಾದ ಮಾರ್ಗದರ್ಶನವಿಲ್ಲದೆ, ಆಸಕ್ತಿ ಕುಂಠಿತವಾಗುವ ವಾತಾವರಣದಿಂದಾಗಿ ಧರ್ಮದ ಅರ್ಥವ್ಯಾಪ್ತಿ ದಿನೇ ದಿನೇ ನಶಿಸಿ, ಅದೆಲ್ಲ ಸೊರಗಿ ಹೋಗುವ ಸ್ಥಿತಿ ಬಂದಿದೆ. ಅಂತೆಯೇ ಹೊಸ ಹಳೆ ತಲೆಮಾರುಗಳ ನಡುವೆ ಸಮ್ಮಿಲನ ಸಾಮರಸ್ಯ ಅಸಾಧ್ಯವೆನ್ನುವಷ್ಟು ಅಳಕ್ಕಿಳಿದಿದೆ. ದೇಶದ ನಾಗರೀಕತೆ ಬದಲಾದಂತೆ ಧರ್ಮದ ನಿಲುವು, ಅಳಕ್ಕಿಳಿದಿದೆ. ದೇಶದ ನಾಗರೀಕತೆ ಬದಲಾದಂತೆ ಧರ್ಮದ ನಿಲುವು, ಸಂಪ್ರದಾಯ ಬದಲಾಗುತ್ತ ನಡೆಯುತ್ತಿವೆ. ಸಂದರ್ಭಕ್ಕೆ ತಕ್ಕಂತೆ ಅದರ ಸ್ವರೂಪ ಬದಲಾದಂತೆ ನಿಯಮಗಳನ್ನು ಸಹಾ ನಾವು ಸಡಿಲಿಸಬೇಕಾಗುತ್ತೆ. ಯಾವ ನಾಡು ತನ್ನ ಯುವಜನರ ಹೇಳಿಕೆಗೆ ಪ್ರಾಶಸ್ತ್ಯವನು ನೀಡುತ್ತದೆಯೋ ಅಲ್ಲಿ ಧರ್ಮ ಸಂಸ್ಕೃತಿಗಳು ಉತ್ತಮ ಸ್ಥಿತಿಯಲ್ಲಿ ಪ್ರವರ್ಧಮಾನಕ್ಕೆ ಬಂದೇ ಬರುತ್ತದೆ. ಮನೆಯಲ್ಲಿ ಕುಳಿತು ಅಜ್ಜಿ ಹೇಳುವ ಕತೆ, ಪುರಾಣಗಳನ್ನು ಕೇಳಿಕೊಂಡು, ಹಾಗೇ ನಡೆದುಕೊಂಡು ಹೋಗುವ ಕಾಲ ಹೋಗಿದೆ. ಪ್ರತ್ಯಕ್ಷ ಪ್ರಮಾಣಗಳಿಂದ ಜಗತ್ತನ್ನು ಅರಿಯಲು ಪ್ರಯತ್ನಿಸುತ್ತಿರುವ ಈ ಸ್ಪುಟ್ನಿಕ್ ಯುಗದಲ್ಲಿ ಧರ್ಮವೆಂಬ ಮಾತು ಉಳಿಯ ಬೇಕಾದರೆ ಅದರ ನಿಜರೂಪದ ಪ್ರತ್ಯಕ್ಷ ದರ್ಶನವಾಗಬೇಕಾಗಿದೆ. ಅಸಂಖ್ಯಾತ ಅವಿದ್ಯಾವಂತರ ಮಧ್ಯೆ ಅಲ್ಪ ಸಂಖ್ಯಾತ ಬುದ್ಧಿ ಜೀವಿಗಳು ಅಧಿಕಾರ ಸೂತ್ರ ಹಿಡಿದು ಅರ್ಥ ಮಾಡಿಕೊಳ್ಳಲಾಗದ ಶ್ರಮ ಜೀವಿಗಳ ಸಲುವಾಗಿ ನಿಯಮಗಳನ್ನೂ, ವಿಚಾರವನ್ನೂ ಸಾರಿದ್ದು ಮಾತ್ರ

ವಲ್ಲ ಎಲ್ಲದರಲ್ಲಿಯೂ ಭಯ ಹುಟ್ಟಿಸಿ ತಮ್ಮ ವಿಷಯೋಪಭೋಗಗಳಲ್ಲಿ ತಲ್ಲೀನರಾಗಿದ್ದಾರೆ. ಇದನ್ನು ಅರ್ಥಮಾಡಿಕೊಳ್ಳಲಾರದೆ ದೌರ್ಜನ್ಯಕ್ಕೊಳಗಾಗಿಯೂ ಮುಗ್ಧರಂತೆ ಕಾಲ ಹಾಕುವ ಅವಿದ್ಯಾವಂತರ ಮೌಢ್ಯಕ್ಕೆ ಇದೊಂದು ಪ್ರತ್ಯಕ್ಷ ನಿದರ್ಶನ.

ಕೆಟ್ಟ ಆಲೋಚನೆ ಮಿತಿಮೀರಿದಾಗ ವಿವೇಚನೆ ಎದ್ದು ತಪ್ಪು ಹಾದಿಯನ್ನು ತುಳಿಯದಿರೆಂದು ಎಚ್ಚರಿಸುವುದಿಲ್ಲವೇ? ಹಾಗೆಯೇ ಹಿಂದೆ ಆಗಿ ಹೋದ ಪುಣ್ಯಾತ್ಮರು ನುಡಿದ ನುಡಿ ಎತ್ತಲೋ ಸಾಗುತ್ತಿರುವ ಯುವಜನಾಂಗದಲ್ಲಿ ವಿವೇಕ ಮೂಡಿಸಿ ಅದು ಮಾರ್ಗೋನ್ಮುಖವಾಗುವಂತೆ ಮಾಡಬಲ್ಲದು. ಇದಕ್ಕೆಲ್ಲ ಮಾರ್ಗದರ್ಶನ ಅತಿಮುಖ್ಯ.

ನಮ್ಮ ಸಂಪ್ರದಾಯ ಸಂಕೇತಗಳನ್ನು 'ಗೊಡ್ಡು' ಎನ್ನುವ ಜನಾಂಗಕ್ಕೆ ಅವುಗಳ ಹಿನ್ನೆಲೆಯಲ್ಲಿರುವ ಧರ್ಮದ ಸಾರವನ್ನು ಹೇಳುವ ಧೀಮಂತ ವ್ಯಕ್ತಿ ಉದಯವಾಗಬೇಕಾಗಿದೆ. ಸುಸಂಸ್ಕೃತಿಯ ತರುಣ ತನ್ನ ಕರ್ತವ್ಯ ಹಾಗೂ ಧರ್ಮವನ್ನೆಂದಿಗೂ ಮರೆಯಲಾರ. ಅಂತಹ ಪ್ರಜ್ಞೆ ನಮ್ಮ ಯುವಜನಾಂಗದಲ್ಲಿ ಮೂಡಿಬರಬೇಕಾದರೆ ಧರ್ಮಕೇಂದ್ರಗಳಲ್ಲಿ ಆದಷ್ಟು ಅವಕಾಶ ದೊರಕಿಸುವುದು ದೇಶದ ಭದ್ರ ಬುನಾದಿ ಹಾಕಬೇಕೆನ್ನುವವರ ಪವಿತ್ರ ಕರ್ತವ್ಯ.

ಹಿಂದಿನ ಯುವಕರು ಧರ್ಮ ಪೀಠಗಳಲ್ಲಿ ಅಥವ ಅರಣ್ಯದಲ್ಲಿ ಒಂಟಿಯಾಗಿದ್ದು ಧರ್ಮ ಗುರುವಿನ ಸನ್ನಿಧಿಯಲ್ಲಿ ಶಾಸ್ತ್ರ ಪುರಾಣಗಳನ್ನು ಕಲಿತು ಧರ್ಮ ಪ್ರಜ್ಞೆ ಹೊಂದುತ್ತಿದ್ದರು. ಆದರೆ ಕಾಲ ಬದಲಾಯಿಸಿದೆ. ಪಾಶ್ಚಾತ್ಯ ಸಂಸ್ಕೃತಿಗಳು ನಮ್ಮನ್ನಾಳುತ್ತಿವೆ. ಇಂದಿನ ಯುವಕರಲ್ಲಿರುವ ಅಶಾಂತಿ, ಅತೃಪ್ತಿ, ಅಸಹಕಾರಗಳಿಗೆ ಸನ್ನಿವೇಶಗಳೇ ಕಾರಣವೆಂದು ಹೇಳುವುದರಲ್ಲಿ ಅರ್ಥವಿಲ್ಲ. 'Youth are the salt of the Nation' ಎಂಬ ಮಹಾತ್ಮರ ನುಡಿಯನ್ನು ಪರಿಶೀಲಿಸಿದರೆ ಯಾವ ರಂಗದಲ್ಲಿಯೇ ಆಗಲಿ ಯುವ ಜನಾಂಗದ ಪಾತ್ರವಿಲ್ಲದೆ ರಾಷ್ಟ್ರ ಬಲಿಯಲಾರದು. ಆದ್ದರಿಂದ ಯುವಕ, ಯುವತಿಯರನ್ನು ಈ ಧರ್ಮ ಕೇಂದ್ರಗಳ ಕಾರ್ಯ ವ್ಯಾಪ್ತಿಯಲ್ಲಿ ಬಳಸಿಕೊಳ್ಳುವುದು ದೇಶದ ಉನ್ನತಿಗೆ ಉಚಿತ. ಇಂದಿನ ಯುವ ಜನಾಂಗದ ಶಕ್ತಿಯನ್ನು ಸಾಮಾಜಿಕ ಉದ್ಧಾರಕ್ಕೆ ಬಳಸಿಕೊಳ್ಳುವುದಾದರೆ ಅವರಿಗೆಲ್ಲ ನಿರ್ಮಲ, ನೈತಿಕ, ಧಾರ್ಮಿಕ, ಮೌಲ್ಯವೇನೆಂಬುದನ್ನು ಅರ್ಥಮಾಡಿಕೊಡುವುದು ಅತ್ಯಗತ್ಯ. ಸಹನೆ, ಪರಧರ್ಮ ಸಹಿಷ್ಣುತೆ, ಯುವಕರಲ್ಲಿ ಮೊಳೆಯಬೇಕಾದರೆ ಹಿರಿಯರ ಮಾರ್ಗದರ್ಶನ ಇಂತಹ ಧರ್ಮಕೇಂದ್ರಗಳಲ್ಲಿ ಸಿಗಬೇಕಾದುದು ಮುಖ್ಯ. ರಚನಾತ್ಮಕ ಚಟುವಟಿಕೆಗಳಲ್ಲಿ ಯುವಕ ಯುವತಿಯರಿಗೆ ಯಾವಾಗಲೂ ಅವಕಾಶವಿರಬೇಕು. ಇಲ್ಲವಾದಲ್ಲಿ ಅವರಲ್ಲಿ ನೈತಿಕ ಶಕ್ತಿ ಕುಂದಿ ಅಧಃಪತನಕ್ಕೆ ಕಾರಣವಾಗುವುದು. ಒಳ್ಳೆಯ ವಾತಾವರಣದಲ್ಲಿ ಬೆಳೆದ ಯುವಕ ಸಮಾಜಕ್ಕೆ, ದೇಶಕ್ಕೆ, ಅಮೂಲ್ಯ ಆಸ್ತಿಯಾಗುವುದರಲ್ಲಿ ಸಂಶಯವಿಲ್ಲ. ಅಂತಹ ಸನ್ನಿವೇಶಗಳನ್ನು ಅವರಿಗೆ ಒದಗಿಸಬೇಕಾದರೆ, ಧರ್ಮಕ್ಷೇತ್ರಗಳಲ್ಲಿ ಅವರಿಗೆ ಮಾರ್ಗದರ್ಶನ ನೀಡುವುದು, ತನ್ನ ಕರ್ತವ್ಯದ ಗುರುತರವಾದ ಹೊಣೆಯ ಅರಿವನ್ನುಂಟುಮಾಡಿಕೊಡುವುದು, ಉತ್ತಮವಾದ ವಿದ್ಯಾಭ್ಯಾಸ ಕೊಡುವುದು ಇವೇ ಮುಂತಾದ ಚಟುವಟಿಕೆಗಳ ಕಡೆ ಗಮನವೀಯಬೇಕಾಗುತ್ತದೆ. ಆಗ ಅವರು ಸ್ವಶಕ್ತಿ ಸಾಮರ್ಥ್ಯಗಳನ್ನು ಉಳಿಸಿಕೊಂಡು ನಾಡಿನ ಏಳಿಗೆಗಾಗಿ ತ್ಯಾಗಮಯ ಜೀವನವನ್ನು ನಡೆಸುವುದರಲ್ಲಿ ಸಂಶಯವಿಲ್ಲ.

ರಾಷ್ಟ್ರ ನಿರ್ಮಾಣಕ್ಕೆ ಯುವಕರ ಜವಾಬ್ದಾರಿಯುತ ನಡವಳಿಕೆ ಅತಿ ಮುಖ್ಯವೆಂಬುದು ನಿರ್ವಿವಾದ. ಅದಕ್ಕಾಗಿ ಯುವಜನಾಂಗವನ್ನು ಪ್ರತಿಭಾ ಸಂಪನ್ನರಾಗಿ ಮಾಡಲು ಹಾಗೂ ಅವರಿಗೆ ಧಾರ್ಮಿಕ ಚಟುವಟಿಕೆಗಳಲ್ಲಿ ಹೆಚ್ಚಿನ ಅವಕಾಶಕೊಡಲು ಭಾರತೀಯ ಧರ್ಮಕೇಂದ್ರಗಳು ಮುಂದೆ ಬರಬೇಕಾಗಿದೆ.—

ಮುಂದುವರಿದ ಲೇಖನ

# ನಮ್ಮ ರೈತ
# ಅಂದು-ಇಂದು

— ಡಿ. ವೆಂಕಟರಾವ್, ಎಂ.ಎ.,

ಭೂಮಿಯನ್ನು ಉತ್ತು, ಬಿತ್ತು ಸಾಗುವಳಿಯನ್ನು ಮಾಡಲು ಅನೇಕ ಸಾಧನಗಳು ರೈತರಿಗೆ ಅವಶ್ಯವಾಗಿ ಬೇಕಾಗುತ್ತವೆ. ಇವುಗಳ ಹೊರತು ಕೃಷಿಯು ಕೆಲಸ ನಡೆಯಲಾರದು. ಇವುಗಳಲ್ಲಿ ಮುಖ್ಯವಾದವು ನೇಗಿಲು, ಎತ್ತುಗಳು, ಬೀಜಗಳು, ಗೊಬ್ಬರಗಳು ಇತ್ಯಾದಿ. ಆದರೆ ನಮ್ಮ ರೈತರ ಬಡತನದ ಬವಣೆ ಎಷ್ಟಿದೆಯೆಂದರೆ ಕೆಲವರ ಬಳಿ ನೇಗಿಲು ಗಳಿದ್ದರೆ ಎತ್ತುಗಳಿರುವುದಿಲ್ಲ. ನೇಗಿಲ—ಎತ್ತುಗಳಿದ್ದರೆ ಸುಧಾರಿಸಿದ ಬೀಜ ಹಾಗೂ ಗೊಬ್ಬರಗಳು ಇರುವುದಿಲ್ಲ ಒಂದು ವೇಳೆ ಇವೆಲ್ಲವೂ ಇದ್ದಿತೆಂದುಕೊಂಡರೆ ಕೃಷಿಗೆ ಅತ್ಯಂತ ಮುಖ್ಯವಾಗಿ ನೀರಾವರಿ ಸೌಲಭ್ಯಗಳಿರುವುದಿಲ್ಲ. ಅಲ್ಲದೆ ನಮ್ಮ ದೇಶದಲ್ಲಿ ಕೃಷಿಯು ಪ್ರಕೃತಿಯ ಕೃಪೆಗೆ ಒಳಪಟ್ಟಿರುವುದರಿಂದ ಕೆಲವು ವೇಳೆ ಮಳೆಯೇ ಇಲ್ಲದೆ, ಬೆಳೆಯಾಗದಿದ್ದರೆ ಮತ್ತು ಕೆಲವು ಬಾರಿ ಮಳೆಯ ಮಹಾಪೂರ ಬಂದು ಕೊಯ್ಲಿಗೆ ಬಂದ ಬೆಳೆಯನ್ನೇ ಅಲ್ಲದೆ ಭೂಮಿಯ ಫಲವತ್ತತೆಯ ಸಾರದೊಂದಿಗೆ ಹಳ್ಳಿಗಳನ್ನೇ ಕೊಚ್ಚಿಕೊಂಡು ಹೋಗುವ ಸಂಭವ ಉಂಟು. ಇವಕ್ಕೆಲ್ಲಾ ಕಳಸವಿಟ್ಟಂತೆ 'ದುರ್ಭಿಕ್ಷದಲ್ಲಿ ಅಧಿಕಮಾಸ ವೆಂಬಂತೆ, ಬೆಳೆಗಳಿಗೆ ಕೀಟಗಳಿಂದ ರೋಗಗಳು ತಗುಲಿ ಬೆಳೆ ನಾಶವಾಗುವುದೂ ಉಂಟು. ಹೀಗೆ ರೈತರಿಗೆ ಹಲವಾರು ಸಮಸ್ಯೆಗಳಿದ್ದರೂ, ಕೃಷಿಯ ಕಾರ್ಯಗಳನ್ನು ತಮ್ಮ ಜೀವನೋಪಾಯಕ್ಕಾಗಿ ಕೈಗೊಳ್ಳಲೇ–ಬೇಕಾಗುತ್ತದೆ. ಇದಕ್ಕಾಗಿ ಕೃಷಿಯ ಉಪಕರಣಗಳನ್ನು, ಸುಧಾರಿಸಿದ ಬೀಜಗಳನ್ನು ಕೊಳ್ಳಲು ಹಾಗೂ ಪ್ರತಿ ವರ್ಷವೂ ಮೆಕ್ಕಲುವಣ್ಣು ಕೊಚ್ಚಿಕೊಂಡು ಹೋಗದಂತೆ ಒಡ್ಡು ಹಾಕಲು, ಕ್ರಿಮಿನಾಶಕ ಜೊತೆಗೆ ದೈನಂದಿನ ಕಾರ್ಯಗಳಿಗೆ ಕುಟುಂಬದ ಪೋಷಣೆಯ ನಿರ್ವಹಣೆಗೆ ರೈತರಿಗೆ ಹಣ ಬೇಕಾಗುತ್ತದೆ. ಉತ್ಪನ್ನವನ್ನು ಹೆಚ್ಚಿಸಲು ಅಧಿಕ ಇಳುವರಿ ಬಿತ್ತನೆ ಬೀಜಗಳ ಬಳಕೆ, ರಾಸಾಯನಿಕ ಗೊಬ್ಬರಗಳು, ಕ್ರಿಮಿನಾಶಕಗಳು, ನವೀನ ಯಂತ್ರೋಪಕರಣಗಳು ಹಾಗೂ ನೀರಾವರಿಯ ಸೌಲಭ್ಯಗಳನ್ನು ಬಳಸಬೇಕಾಗುತ್ತದೆ. ಇದಕ್ಕೆಲ್ಲಾ ಹೆಚ್ಚಿನ ಹಣ ಬೇಕು. ಆದರೆ ರೈತರು ಬಡವರಾಗಿರುವುದರಿಂದ ಇವುಗಳಿಗೆಲ್ಲಾ ವ್ಯಯ ಮಾಡಲು ಅವರ ಬಳಿ ಹಣವಿರುವುದಿಲ್ಲ. ಬೇರೆ ದಾರಿ ಕಾಣದ ಅವರು ಹಳ್ಳಿಯ ಸಾಹುಕಾರರ ಬಳಿ ಭೂಮಿಯನ್ನು ಆಧಾರವಾಗಿಟ್ಟು ಸಾಲಕ್ಕಾಗಿ ಕೈ ಒಡ್ಡುತ್ತಾರೆ. ಹಳ್ಳಿಯ ಸಾಹುಕಾರರು ರೈತನನ್ನು ಪೂರ್ತಿಯಾಗಿ ತಮ್ಮ ಬಲೆಯಲ್ಲಿ ಬೀಳಿಸಿಕೊಂಡು, ಅವರ ಬಡತನ ಮತ್ತು ಅಜ್ಞಾನದ ಲಾಭವನ್ನೂ ಸಂಪೂರ್ಣವಾಗಿ ಪಡೆಯುತ್ತಾರೆ. ಈ ರೀತಿ ಶ್ರಮಕ್ಕೆ ತಕ್ಕ ಫಲ ದೊರೆಯದೆ, ಕೈ ತುಂಬಾ ಹಣವೂ ಸಿಗದೆ, ದೈಹಿಕವಾಗಿ ಮತ್ತು ಮಾನಸಿಕವಾಗಿ ಶಾಂತಿಯನ್ನು ಕಳೆದುಕೊಂಡು ಹಣದ ಮುಗ್ಗಟ್ಟಿನಿಂದ ಜರ್ಝರಿತರಾಗುವ ರೈತರು ಹೆಚ್ಚು ಬೆಳೆಯನ್ನು ಬೆಳೆಯುವಲ್ಲಿ ಉತ್ಸಾಹಹೀನರಾಗುವುದು ಸಹಜ. ರಾಷ್ಟ್ರದ ಜೀವನಾಡಿಗಳಾದ ನಮ್ಮ ರೈತರು ಸಾಲದ ಹೊರೆಯನ್ನು ಬೆನ್ನಮೇಲೆ ಹೊತ್ತು ಆರ್ಥಿಕ ಮುಗ್ಗ

ಇಲ್ಲಿಯವರೆಗೆ..... ..... ... . .....

ಸ್ವಾತಂತ್ರ್ಯಪೂರ್ವದಲ್ಲಿ ಇದ್ದ ಆರ್ಥಿಕ ಜಡತೆಯನ್ನು ಕೊಡವಿ ಮೇಲೆದ್ದು ರಾಜಕೀಯ, ಸಾಮಾಜಿಕ, ಆರ್ಥಿಕ, ನೈತಿಕ ಸ್ವಾತಂತ್ರ್ಯಗಳನ್ನು ಗಳಿಸಿ ಸಮಾನತಾ ಧ್ಯೇಯ ಸಾಧನೆಯತ್ತ ಭಾರತ ಮುನ್ನಡೆಯಲು ಶ್ರಮಿಸುತ್ತಿದೆ. ಹಲವಾರು ಯೋಜನೆಗಳನ್ನು ಕೈಗೊಂಡು ತನ್ಮೂಲಕ ರೈತರ ಸಮಸ್ಯೆಗಳನ್ನು ವಿಶ್ಲೇಷಿಸಿ ಪರಿಹಾರ ಕಂಡು ಹಿಡಿಯುವಲ್ಲಿ ಯಶಸ್ವಿಯಾಗುತ್ತಿದೆ......... .........ಇನ್ನು ಮುಂದೆ ಓದಿ

ಟ್ಟಿನಿಂದ ನರಳುತ್ತಿದ್ದರೆ ನಮ್ಮ ದೇಶದ ಪರಿಸ್ಥಿತಿ ಸುಧಾರಿಸುವುದು ಅಸಾಧ್ಯ. ರೈತರ ಪರಿಸ್ಥಿತಿ ಸುಧಾರಿಸಬೇಕಾದರೆ ಕೃಷಿರಂಗದ ಅಭಿವೃದ್ಧಿಯಾಗಬೇಕಾದುದು ಅಗತ್ಯ.

ಕೃಷಿ ಅಭಿವೃದ್ಧಿ :

ನಮ್ಮ ದೇಶದ ಆರ್ಥಿಕ ಪ್ರಗತಿ, ಕೃಷಿಯ ಅಭಿವೃದ್ಧಿಯ ಮೇಲೆ ನಿಂತಿದೆ ಕೃಷಿರಂಗದ ಸುಧಾರಣೆಯಾದಲ್ಲಿ ನಮ್ಮ ಬಡ ರೈತರ ಆರ್ಥಿಕ ಸ್ಥಿತಿ ಗತಿಗಳೂ ಉತ್ತಮಗೊಂಡು, ಅವರ ಬದುಕು ಸಮೃದ್ಧಿಯ ಬೀಡಾಗುತ್ತದೆ. ಆದ್ದರಿಂದಲೇ ಸ್ವಾತಂತ್ರ್ಯ ನಂತರದ ನಮ್ಮ ಅರ್ಥ ವ್ಯವಸ್ಥೆಯಲ್ಲಿ ಸರಕಾರವು ರೈತರಿಗೆ ಮಹತ್ತರವಾದ ಸ್ಥಾನವನ್ನು ಕೊಟ್ಟು ಅವರ ವೃತ್ತಿಯ ಅಭಿವೃದ್ಧಿಗಾಗಿ ಅಧಿಕ ಗಮನವನ್ನು ಕೊಟ್ಟದೆ. ಇದರ ಮುಖ್ಯ ಉದ್ದೇಶ ಆರ್ಥಿಕ ಸ್ವಾತಂತ್ರ್ಯವನ್ನು ಗಳಿಸಿ ಆಹಾರದಲ್ಲಿ ಸ್ವಾವಲಂಬನೆಯನ್ನು ಪಡೆಯುವುದು. ಈ ದಿಸೆಯಲ್ಲಿ ಅನೇಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲಾಗಿದೆ.

ಭೂ ಸುಧಾರಣೆಗಳು :

ಸ್ವಾತಂತ್ರ್ಯಕ್ಕೆ ಮೊದಲು ನಮ್ಮ ರೈತರ ಸ್ಥಿತಿ ಬಹಳ ಚಿಂತಾಜನಕವಾಗಿತ್ತು. ಎಷ್ಟೋ ರೈತರಿಗೆ ಉಳಲು ಭೂಮಿಯೇ ಇರಲಿಲ್ಲ. ಒಂದು ವೇಳೆ ಭೂಮಿ ಇದ್ದರೂ ತುಂಡು ತುಂಡಾಗಿದ್ದವು. ಆಗ ಜಾರಿಯಲ್ಲಿದ್ದ ಜಮೀನು ದಾರಿ, ರೈತವಾರಿ ಪದ್ಧತಿಗಳು ಕೃಷಿ ಏಳಿಗೆಗೆ ಕಂಟಕ ಪ್ರಾಯವಾಗಿದ್ದು ರೈತರ ಸುರಕ್ಷತೆಯನ್ನು ಕಸಿದಿದ್ದುವು. ಆದರೆ ಸ್ವಾತಂತ್ರ್ಯ ನಂತರ ರೈತರಿಗೆ ಭದ್ರತೆಯನ್ನು ಒದಗಿಸುವ ಸಲುವಾಗಿ ಭೂ ಸುಧಾರಣೆಗಳನ್ನು ಜಾರಿಗೆ ತರಲಾಯಿತು. ಇದರ ಮುಖ್ಯಗುರಿ ರೈತರಿಗೆ ಸಾಮಾಜಿಕ ನ್ಯಾಯಗಳನ್ನು ಒದಗಿಸುವುದರ ಜೊತೆಗೆ ಕೃಷಿಯ ಉತ್ಪಾದನಾ ಶಕ್ತಿಯನ್ನು ಹೆಚ್ಚಿಸುವುದು. ಇದರಿಂದಾಗಿ ಅನೇಕ ಶತಮಾನಗಳಿಂದ ನಮ್ಮ ದೇಶದ ರೈತರ ಹಾದಿಯಲ್ಲಿ ಬೇರೂರಿದ್ದ ಒಂದು ದೊಡ್ಡಮುಳ್ಳನ್ನು ಕಿತ್ತೊಗೆದಂತಾಗಿದೆ. ಸ್ವಾತಂತ್ರ್ಯ ನಂತರ ನಡೆದ ಅನೇಕ ಸುಧಾರಣೆಗಳಲ್ಲಿ ಇದು ಅತಿ ಕ್ರಾಂತಿಕಾರಿಯಾದುದೆಂದು ಹೇಳಬಹುದು. ಮಧ್ಯವರ್ತಿಗಳ ನಿವಾರಣೆ, ರೈತರಿಗೆ ಭವಿಷ್ಯದ ಬಗ್ಗೆ ಭದ್ರತೆ, ರೈತರಿಗೆ ಒಡೆತನದ ಹಕ್ಕು, ಹಿಡುವಳಿಗಳನ್ನು ಒಂದುಗೂಡಿಸುವುದು, ಅವು ತುಂಡು ತುಂಡಾಗದಂತೆ ತಡೆಯುವುದು, ಭೂಮಿ ಇಲ್ಲದವರಿಗೆ ಭೂಮಿಯನ್ನು ಹಂಚುವುದು, ಸಹಕಾರಿ ಬೇಸಾಯದ ಅಭಿವೃದ್ಧಿ, ನ್ಯಾಯ ಗೇಣಿ ಮುಂತಾದ ಅನೇಕ ಸದುದ್ದೇಶಗಳನ್ನು ಈ ಕಾರ್ಯಕ್ರಮದಲ್ಲಿ ಸೇರಿಸಲಾಗಿದೆ. ಇದರ ಬಗ್ಗೆ ಎಲ್ಲಾ ರಾಜ್ಯಗಳಲ್ಲೂ ಶಾಸನವನ್ನು ಜಾರಿ ಮಾಡಲಾಗಿದೆ. ಇದರ ಪ್ರಕಾರ ಭೂಮಾಲೀಕರು ತಮ್ಮ ಸ್ವಂತ ಬೇಸಾಯಕ್ಕೆ ಭೂಮಿಯನ್ನು ಉಳಿಸಿಕೊಳ್ಳಬಹುದು. ಹಾಗೆಯೇ ರೈತರು ತಾವು ಉಳುತ್ತಿರುವ ಭೂಮಿಯ ಒಡೆತನದ ಹಕ್ಕನ್ನು ಪಡೆಯಬಹುದು. ಭೂ ಸುಧಾರಣೆಯ ಮತ್ತೊಂದು ವೈಶಿಷ್ಟ್ಯವೆಂದರೆ ಹಿಡುವಳಿಗಳ ಮೇಲೆ ಮಿತಿ ಹೇರುವುದು. ಮಿತಿಗಿಂತ ಹೆಚ್ಚಾದ ಭೂಮಿಯನ್ನು ಭೂ ರಹಿತ ರೈತರಿಗೆ ಹಂಚಲಾಗುವುದು. ನಮಗೆ ಸ್ವಾತಂತ್ರ್ಯ ಬಂದಾಗ ಸುಮಾರು ಐದು ಕೋಟಿ ರೈತರು ಭೂರಹಿತರಾಗಿದ್ದರು. ಆದ್ದರಿಂದ ಯೋಜನಾವಧಿಯಲ್ಲಿ ಅವರಿಗೆಲ್ಲಾ ಭೂಮಿಯನ್ನು ಹಂಚಿ, ಅವರ ಆರ್ಥಿಕ ಪರಿಸ್ಥಿತಿಯಲ್ಲಿ ಸುಧಾರಣೆಯನ್ನು ತರಲಾಯಿತು. ನಮ್ಮ ದೇಶದಲ್ಲಿರುವ ಚಿಕ್ಕ ಚಿಕ್ಕ ಹಿಡುವಳಿಗಳನ್ನು ಒಟ್ಟುಗೂಡಿಸಿ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದು ಮತ್ತೊಂದು ಮಹತ್ವದ ಸುಧಾರಣೆಯಾಗಿದೆ. ರೈತರ ಬಾಳಿನಲ್ಲಿ ಆಶಾ ದೀವಿಗೆಯಾಗಿ ಬೆಳಗುತ್ತಿರುವ ಭೂಸುಧಾರಣೆಗಳು ಇಂದು ಗ್ರಾಮೀಣ ಅರ್ಥ ವ್ಯವಸ್ಥೆಯಲ್ಲಿ ರೋಮಾಂಚಕಾರಿ ಮಾರ್ಪಾಟುಗಳನ್ನು ತಂದಿವೆ. ಇಂದಿನ ರೈತರಿಗೆ ಇವು ವರ ಪ್ರಾಯವಾಗಿ ಪರಿಣಮಿಸಿವೆ. ಇವುಗಳೊಂದಿಗೆ, ನಮ್ಮ ದೇಶದ ಕೃಷಿಯನ್ನು ಪ್ರಗತಿ ಪಥದತ್ತ ಕೊಂಡೊಯ್ಯಲು ಅನೇಕ ಪರಿಣಾಮಕಾರಿ ವ್ಯವಸ್ಥೆಗಳು ರೂಪುಗೊಂಡಿವೆ. ಅವುಗಳಲ್ಲಿ ಮುಖ್ಯವಾದುವು 'ಅಧಿಕ ಬೆಳೆ ಬೆಳೆಯಿರಿ' ಮತ್ತು 'ವಿವಿಧ ಬೆಳೆ ಉತ್ಪಾದನೆಯ' ಯೋಜನೆಗಳು ಹಳ್ಳಿಗಳ ಹಾಗೂ ರೈತರ ಸ್ವರೂಪವನ್ನು ಬದಲಾಯಿಸಲು ಸಹಕಾರಿಯಾಗಿವೆ.

(ಮುಂದುವರೆಯುವುದು)

# ಶಿವಶರಣರ ಏಲೇಶ್ವರ ಕೇತಯ್ಯ

( 8 ನೇ ಪುಟದಿಂದ )

ವಚನದಲ್ಲಿ ಇನ್ನೊಂದು ಪರಿಯಲ್ಲಿ ವಿವರಿಸಿದ್ದಾರೆ. ಸದಾಕಾಲವೂ ನಾವು ಲಿಂಗದ ಸ್ಮರಣೆಯಲ್ಲಿಯೇ ಬಾಳಬೇಕು; ಬೆಳೆಯಬೇಕಲ್ಲವೆ?

ತನು ಶೀಲ ಗುರುಭಕ್ತಿ ಮನಶೀಲ ಲಿಂಗಭಕ್ತಿ;
ಧನಶೀಲ ಜಂಗಮಭಕ್ತಿ; ತ್ರಿವಿಧಶೀಲ ಮಹಾಭಕ್ತಿ;
ಅಂಗಮನ ಭಾವಶರಣಂಗಳಲ್ಲಿ ವ್ರತದಂಗವೆ ಪ್ರಾಣ
ವೆಂದು ಇಪ್ಪುದು ಛಲಭಕ್ತಿ.
ಇಂತೀ ಭೇದಭಾವಂಗಳಲ್ಲಿ ಅಣುಮಾತ್ರ ತಪ್ಪ, ಕ್ಷಣ
ಮಾತ್ರ ಸೈರಿಸೆನೆಂಬುದು ನಿಶ್ಚಯ ಭಕ್ತಿ,
ಇಂತಿ ವರ್ತಕ ಶುದ್ಧ ಸದ್ಭಕ್ತಂಗೆ ಮರ್ತ್ಯ ಕೈಲಾಸ
ವೆಂಬ ತತ್ತು ಗೊತ್ತಿಲ್ಲ.

ಆತ ವ್ರತ ಲಕ್ಷಣಮೂರ್ತಿ, ಏಲೇಶ್ವರ-ಲಿಂಗವು ತಾನೆ. ಮೊದಲಾದ ಪ್ರಭಾವಕಾರಿ, ಪರಿಣಾಮಕಾರಿ, ವಿಚಾರ ಪ್ರಚೋದಕ ನಿತ್ಯ ಸತ್ಯವಾದ ನುಡಿಮುತ್ತಿನ ಗೊಂಚಲುಗಳೇ ಆತನ ವಚನಗಳು. ಬಸವಾದಿ ಪ್ರಮಥರ ತತ್ವಗಳನ್ನ ಎತ್ತಿ ಹಿಡಿದ ಧೀಮಂತ ಶರಣ, ಕೇತಯ್ಯ. ವೀರಶೈವರ ಧ್ವಜ ಪತಾಕೆಯನ್ನು ಹಾರಿಸಿದ ವೀರ ಶರಣ ಕೇತಯ್ಯ. ಆತನು ಸಾರಿದ ದಿವ್ಯ ತತ್ವ ಬಾಳಿಗೆ ಬೆಳಕು ಬೀರುತ್ತದೆ.

ವೀರಶೈವ ಮಹಾಕವಿ ಚಾಮರಸ ತನ್ನ ಪ್ರಭುಲಿಂಗಲೀಲೆಯಲ್ಲಿ ಕೇತಯ್ಯನನ್ನು ಹೃತ್ಪೂರ್ವಕವಾಗಿ ಹೀಗೆ ಸ್ಮರಿಸಿರುವುದು ಗಮನಾರ್ಹ ಸಂಗತಿ.

"ಮರುಳ ಶಂಕರ ದೇವರಿಗೆ ಕಿನ್ನರಿಯ"
ಬೊಮ್ಮಯ್ಯಗೆ ಯೇಲೇಶ್ವರದ
ಕೇತಯ್ಯಗೆ ಗಾಣದ ತನ್ನಪ್ಪಯ್ಯಗೆ..............."

ವೀರವಿರಾಗಿಣಿ, ಚೆನ್ನಮಲ್ಲಿಕಾರ್ಜುನನ ಅಚ್ಚುಮೆಚ್ಚಿನ ರಾಣಿ, ಕನ್ನಡದ ಪ್ರಪ್ರಥಮ ಶ್ರೇಷ್ಠ ಅನುಭಾವಿ ವಚನಕಾರ್ತಿಯೆಂದು ವಿಖ್ಯಾತಿ ಪಡೆದ ಅಕ್ಕಮಹಾದೇವಿಯವರು ಸಹ ಏಲೇಶ್ವರ ಕೇತಯ್ಯನನ್ನು ತಮ್ಮ ಒಂದು ವಚನದಲ್ಲಿ ಹೀಗೆ ಸ್ತುತಿಸಿರುವುದು ಒಂದು ಗಮನಾರ್ಹ ಅಂಶ.

"ಪೃಥ್ವಿಯ ಗೆಲಿದ ಏಲೇಶ್ವರನ ಕಂಡೆ
ಭಾವಭ್ರಮೆಯ ಗೆಲಿದ ಬ್ರಹ್ಮೇಶ್ವರನ ಕಂಡೆ...... "
ಆ ಬಸವಣ್ಣನ ಪ್ರಸಾದದಿಂದ ಚೆನ್ನಮಲ್ಲಿಕಾರ್ಜುನನ ಕಂಡೆ"

ಹಾಗೆಯೇ ಮಹಾಯೋಗಿ ಸಿದ್ಧರಾಮೇಶ್ವರನೂ ಕೂಡ ತನ್ನ ಒಂದು ವಚನದಲ್ಲಿ ಕೇತಯ್ಯನವರ ಹೆಸರನ್ನು ಎತ್ತಿಕೊಂಡಿರುವುದು ವಿದಿತವಿದೆ.

"ಭಕ್ತಿಯ ಕೂಟವಾಯಿತು ಬಸವಣ್ಣಂಗೆ
ಶಕ್ತಿಯ ಕೂಟವಾಯಿತು ಏಲೇಶ್ವರದ
ಕೇತಯ್ಯಂಗೆ...........
"ಐಕ್ಯಕೂಟವಾಯಿತು ಅನಿಮಿಷಂಗೆ
ಪ್ರಾಣಲಿಂಗ ಕೂಟವಾಯಿತ್ತು ನಿಮಗೆ ಕಪಿಲ
ಸಿದ್ಧಮಲ್ಲಿಕಾರ್ಜುನ"

ಈ ಮೇಲಣ ಎಲ್ಲ ವಿವೇಚನೆಯಿಂದ ಏಲೇಶ್ವರ ಕೇತಯ್ಯ ಲಿಂಗದೇವನಲ್ಲಿ ಅಚಲ ನಿಷ್ಠೆಯಿಂದ ಮಹಾಶರಣನಾಗಿದ್ದನೆಂಬುದು ವಿದಿತವಾಗುವುದಿಲ್ಲವೇ ? —

# ಧಾರ್ಮಿಕ ನೆಲೆ

( 12 ನೇ ಪುಟದಿಂದ )

ಸೀತಾಪಹರಣವಾದಮೇಲೆ ರಾವಣನ ಅಧರ್ಮ ಪರಾಕಾಷ್ಠೆಯನ್ನು ಮುಟ್ಟಿತು. ಹನುಮಂತನನ್ನು ಸಂಧಿಸಿದ ಮೇಲೆ ವಿಭೀಷಣನಿಗೆ ಧರ್ಮಸ್ವರೂಪನಾದ ಭಗವಂತನೇ ಅವತಾರವೆತ್ತಿಬಂದಿರುವಂತೆ ಭಾಸವಾಗುತ್ತದೆ. ಅವನ ಉನ್ನತ ಧರ್ಮಭಾವನೆ ಇನ್ನಷ್ಟು ಜಾಗೃತವಾಗುತ್ತದೆ. ಅವನು ತನ್ನ ಅಣ್ಣ ರಾವಣನಿಗೆ ಹೇಳುತ್ತಾನೆ. ಯಾವ ರೀತಿಯಲ್ಲೂ ಅವನು ಇವನ ಮಾತಿಗೆ ಒಪ್ಪದಿದ್ದಾಗ ವಿಭೀಷಣನಿಗೆ ಎರಡು ಧರ್ಮಗಳನ್ನು ಪರಿಪಾಲಿಸುವ ಸಮಸ್ಯೆ ಎದುರಾಗುತ್ತದೆ. ಒಂದೆಡೆ ಗೃಹಧರ್ಮ ಅಥವಾ ಕುಲಧರ್ಮದ ಪರಿಪಾಲನೆ. ಇನ್ನೊಂದೆಡೆ ಅದಕ್ಕಿಂತಲೂ ಉನ್ನತವೂ ವಿಶಾಲವೂ ಆದ ಧರ್ಮದ ಪರಿಪಾಲನೆ. ಭಕ್ತನ ಧರ್ಮಪ್ರಜ್ಞೆ ತನ್ನ ಗೃಹಧರ್ಮ ಅಥವಾ ಕುಲಧರ್ಮದ ಸಂಕುಚಿತ ಸೀಮೆಯೊಳಗೆ ಬಂಧಿತವಾಗಿರಲು ಸಾಧ್ಯವಿಲ್ಲ. ಅದು ಸಮಸ್ತ ಜಗತ್ತಿನ ಕಲ್ಯಾಣದ ವ್ಯಾಪಕವಾದ ಉದ್ದೇಶವನ್ನಿಟ್ಟು ಅತ್ತ ಪ್ರವೃತ್ತವಾಗುತ್ತದೆ. ಆದ್ದರಿಂದ ಆತ ಕೂಡಲೇ ಲೋಕಕಲ್ಯಾಣಕರವಾದ ಧರ್ಮವನ್ನವಲಂಬಿಸಿ ಧರ್ಮಮೂರ್ತಿಯಾದ ಶ್ರೀರಾಮನ ಚರಣಗಳಲ್ಲಿ ಮೊರೆಹೋಗುತ್ತಾನೆ.

—

# ನಿಮ್ಮ ಭವಿಷ್ಯ — ಜ್ಯೋತಿಷ್ಯ ವಿದ್ವಾನ್. ಎನ್.ವಿ. ಚನ್ನವೀರಶಾಸ್ತ್ರಿಗಳು.

[29-5-76 ರಿಂದ 29-6-76 ರ ವರೆಗೆ]

ಮೇಷ— ೧ ನೇ ಗುರು- ಅನಾರೋಗ್ಯ, ಹಣದುಬ್ಬರ, ಪ್ರಯಾಣ ವಿಕ್ರಯ, ೪ ನೇ ಶನಿ- ಕುಟುಂಬ ಘರ್ಷಣೆ ಖರ್ಚು, ನಿರಾಶೆ, ಬಿಸಿ ವ್ಯವಹಾರ.

ವೃಷಭ— ೧೨ ನೇ ಗುರು- ಋಣ, ದಣಿ ಕೋಪ, ದೂರದ ಆಹ್ವಾನ, ೩ ನೇ ಶನಿ- ರಿಫಾರ್ಸ್, ಭ್ರಾತೃ ವಿಚಾರ, ಭೂಮಿ-ವಾಹನಗಳ ವಿಚಾರ,

ಮಿಥುನ— ೧೧ ನೇಗುರು- ವ್ಯಾಪಾರ, ಉದ್ಯೋಗ, ವ್ಯಾಸಂಗ ಆರ್ಥಿಕ ಇವು ಮೇಲು, ೨ ನೇ ಶನಿ- ಗೃಹದಲ್ಲಿ ಘರ್ಷಣೆ ಮಾರ್ಪಾಟು, ಖರ್ಚು, ಅಪಾದನೆ.

ಕರ್ಕ— ೧೦ ನೇ ಗುರು- ಕಾರ್ಯಾನುಕೂಲ, ಮಿತ್ರರ ಕರೆ, ವ್ಯಾಸಂಗ, ವ್ಯಾಪಾರ ಮೇಲು, ೧ ನೇ ಶನಿ- ಅನಾರೋಗ್ಯ ಮಾನಸಿಕ ಚಿಂತೆ, ಸ್ಥಾನ ಚಲನೆ, ಖರ್ಚು, ದೂರು,

ಸಿಂಹ—೯ ನೇ ಗುರು ಧರ್ಮ ಕಾರ್ಯ, ಅಧಿಕಾರಿ ಭೇಟಿ, ಗೌರವ, ಪ್ರತಿಭೆ ಸುಖ, ೧೨ ನೇ ಶನಿ- ಋಣ. ಕೋರ್ಟು ವಿಚಾರ ಸ್ವಪ್ರಯತ್ನ ವಿಘ್ನ, ಅಧಿಕ ಖರ್ಚು

ಕನ್ಯಾ— ೮ ನೇ ಗುರು- ಅಪಾಯ, ವ್ಯಾಧಿ, ಅಶಾಂತಿ, ಅಧಿಕಾರಿ ಕೋಪ, ಖರ್ಚು, ೧೧ ನೇ ಶನಿ- ವ್ಯಾಸಂಗ ಉತ್ತಮ, ವ್ಯಾಪಾರ, ಉದ್ಯೋಗ, ಆರ್ಥಿಕ ಮೇಲು

ತುಲಾ— ೭ ನೇ ಗುರು- ಆಹ್ವಾನ, ಸನ್ಮಾನ ಪ್ರಯಾಣ, ಉತ್ಪಾದನೆ, ಭೂವೃದ್ಧಿ, ೧೦ ನೇ ಶನಿ- ಸರಕಾರಿ ವ್ಯವಹಾರ, ಮಾರ್ಗಾಯಾಸ, ಭ್ರಾತೃಕಷ್ಟ, ವೈದ್ಯ ಖರ್ಚು,

ವೃಶ್ಚಿಕ— ೬ ನೇ ಗುರು- ಕಾರ್ಯ ವಿಳಂಬ, ಉದ್ಯೋಗ ಪ್ರಯಾಣ, ಧನಾಗಮ, ೯ ನೇ ಶನಿ-ಪಿತೃವರ್ಗ ಚಿಂತೆ ಸತ್ಕಾರ್ಯವಿಘ್ನ, ಕಷ್ಟದ ಸುದ್ದಿ, ಆಯಾಸ,

ಧನಸ್ಸು—೫ ನೇ ಗುರು- ಮೂಲಧನ, ಉದ್ಯೋಗ, ವ್ಯಾಪಾರ ವ್ಯಾಸಂಗ ಉತ್ತಮ, ೮ ನೇ ಶನಿ- ಅಪಘಾತ, ಅಪಾದನೆ, ಮಾತೃ ಕಷ್ಟ, ವಿಕ್ರಯ, ಧನವೆಚ್ಚ.

ಮಕರ— ೪ ನೇ ಗುರು- ಕಾಗದ ಪತ್ರ, ಅಧಿಕಾರಿಗಳ ಕರೆ, ಕಾರ್ಯ ಜಯ, ಸ್ವಪ್ರಯತ್ನ ಮೇಲು ೭ ನೇ ಶನಿ- ಹಿನ್ನೆಲೆಯಲ್ಲಿ ಕುತಂತ್ರ, ಮಾರ್ಗಾಯಾಸ, ಖರ್ಚು, ಗುಪ್ತ ಚಿಂತೆ.

ಕುಂಭ— ೩ ನೇ ಗುರು- ಆಗುವ ಕೆಲಸಕ್ಕೆ ಅಡ್ಡಿ, ಹಣದುಬ್ಬರ, ನಾನಾಚಿಂತೆ, ಖರ್ಚು, ೬ ನೇ ಶನಿ- ಚಿಕಿತ್ಸಾ ಕ್ರಮ, ಅನ್ಯರ ನೆರವು, ಜಾಮೀನು, ಕಲಹ,

ಮೀನ— ೨ ನೇ ಗುರು- ಸಹಾಯ, ಪ್ರಯಾಣ, ದೂರು, ಆಹ್ವಾನ, ಆರ್ಥಿಕ ಉತ್ತಮ, ೫ನೇ ಶನಿ- ಮಾನಸಿಕ ವ್ಯಥೆ, ಬರುವ ಉತ್ಪತ್ತಿಗೆ ವಿಘ್ನ, ಅಧಿಕ ಸಂಚಾರ, ಸೋಲು.—

‘ ಸಿದ್ಧಗಂಗಾ ’
## ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

111. ಶ್ರೀ ಎಸ್. ಶಿವಮೂರ್ತಿ S/o ಸಿದ್ದಪ್ಪ
ತ್ಯಾಗಟೂರು, ಗುಬ್ಬಿ ತಾ||

112. ಶ್ರೀ ಟಿ. ಜಿ. ಸಿದ್ದರಾಮಯ್ಯ
ತ್ಯಾಗಟೂರು, ಗುಬ್ಬಿ ತಾ||

113. ಶ್ರೀ ಬಿ. ಜಯಣ್ಣ S/o ಮುರುಡಪ್ಪ
ಬಿಟ್ಟದಹಳ್ಳಿ, ಗುಬ್ಬಿ ತಾ||

114. ಶ್ರೀ ಬಿ. ಸಿದ್ದಪ್ಪ S/o ಬೆಟ್ಟಯ್ಯ
ಚೇಳೂರು, ಗುಬ್ಬಿ ತಾ||

115. ಶ್ರೀ ಎಸ್, ಬಿ. ಕೆಂಪಣ್ಣ
ಸೀಗೇನಹಳ್ಳಿ, ಗುಬ್ಬಿ ತಾ||

116. ಶ್ರೀ ಬಸವರಾಜು S/o ಚನ್ನಮಾರೇಗೌಡ.
ದೊಡ್ಡ ಸಾರಂಗಿ ತುಮಕೂರು ತಾ||

117 ಮರಿಮಲ್ಲಪ್ಪ ಪ್ರೌಢಶಾಲೆ, ಮೈಸೂರು

118 ಶ್ರೀ ಸಿದ್ದಪ್ಪ S/oಕೆಂಪಸಿದ್ದಯ್ಯ.
ಸೀಗೇನಹಳ್ಳಿ ಗುಬ್ಬಿ ತಾ||

119 ಶ್ರೀ ರುದ್ರಪ್ಪ S/o ಕೈರೋಪಳಯ್ಯ
ದೊಡ್ಡಗುಣಿ, ಗುಬ್ಬಿ ತಾ||

120 ಶ್ರೀ ಪಿ. ಎಸ್. ನಾರಾಯಣಸ್ವಾಮಿ
ರವಿ ಎಲೆಕ್ಟ್ರಿಕಲ್ಸ್, ಚಿಕ್ಕಬಳ್ಳಾಪುರ

121 ಶ್ರೀ ಕೆ. ಎಸ್. ಪುಣ್ಣೇಶ, ಮರ್ಚೆಂಟ್
ಕನಕಪುರ

122 ಶ್ರೀ ಚಿಕ್ಕವೀರಣ್ಣ S/o ಗುಬ್ಬಣ್ಣ
ಗಂಜಲಗುಂಟೆ, ಸಿರಾ ತಾ||

123 ಶ್ರೀ ಪಿ. ಬಿ. ಶಂಕರಪ್ಪ
ಪಿನ್ನೇನಹಳ್ಳಿ, ಗುಬ್ಬಿ ತಾ||

124 ಶ್ರೀ ಪಿ ಬಿ. ಸಿದ್ದಲಿಂಗಪ್ಪ
ಪಿನ್ನೇನಹಳ್ಳಿ ಗುಬ್ಬಿ ತಾ||

125 ಶ್ರೀ ವಿ. ಸದಾಶಿವಯ್ಯ, ಶಿಪಟೂರು

126 ಶ್ರೀ ಕೆ. ನಂಜಪ್ಪ
ಬೂದಿಗೆರೆ, ದೇವನಹಳ್ಳಿ ತಾ||

127 ಶ್ರೀ ಜಿ. ನಾರಾಯಣ
ಬೂದಿಗೆರೆ, ದೇವನಹಳ್ಳಿ ತಾ||

128 ಶ್ರೀ ವಾಗೀಶ ಚಕ್ರೇಶ್ವರ
ಬೂದಿಗೆರೆ, ದೇವನಹಳ್ಳಿ ತಾ||

129 ಶ್ರೀ ಎಸ್. ಗೋವಿಂದಯ್ಯ
ಬೂದಿಗೆರೆ, ದೇವನಹಳ್ಳಿ ತಾ||

130 ಶ್ರೀ ಚನ್ನಬಸಪ್ಪ
ಸೋಗೇನಹಳ್ಳಿ, ಮಧುಗಿರಿ ತಾ||

131 ಶ್ರೀ ಜಿ. ನಂಜಪ್ಪ
ನೆಹರೂನಗರ, ಬೆಂಗಳೂರು-20

132 ಶ್ರೀ ಎಂ. ಆರ್. ಬೈಲಪ್ಪ
ಹೊಸೂರು, ಗೌರಿಬಿದನೂರು ತಾ||

133 ಶ್ರೀ ಬಿ. ರಾಜಶೇಖರ್, ಪ್ಲಾಂಟರ್
ಸಕಲೇಶಪುರ, ಹಾಸನ ಜಿಲ್ಲೆ.

134 ಶ್ರೀ ಪುಟ್ಟಸ್ವಾಮಯ್ಯ S/o ಬೋರೇಗೌಡ,
ಕಂಬತನಹಳ್ಳಿ, ತುಮಕೂರು ತಾ||

135 ಶ್ರೀ ಸಿ. ಬಸವರಾಜಪ್ಪ
ಹನುಮಂತನಗರ, ಬೆಂಗಳೂರು-19

136 ಶ್ರೀ ಐ. ಪಿ. ಶಾಂತಮಲ್ಲಪ್ಪ, ಪ್ಲಾಂಟರ್
ಐಗೂರು, ಸಕಲೇಶಪುರ ತಾ||

137 ಹೆಚ್. ನಾರಾಯಣ ಸ್ವಾಮಿ, ಮರ್ಚೆಂಟ್
ಬೂದಿಗೆರೆ, ದೇವನಹಳ್ಳಿ ತಾ||

138 ಶ್ರೀ ಸಿ. ಬಸವರಾಜು, ಮರ್ಚೆಂಟ್
ಬೂದಿಗೆರೆ, ದೇವಹನಳ್ಳಿ ತಾ||

139 ಶ್ರೀ ಎ. ವಿ. ವೀರಭದ್ರಪ್ಪ& ಬ್ರದರ್ಸ್
ವಿಜಯಪುರ, ಬೆಂಗಳೂರು ಜಿಲ್ಲೆ.

140 ಶ್ರೀ ಚಿಕ್ಕಣ್ಣಯ್ಯಪ್ಪ, ಮರ್ಚೆಂಟ್
ದೇವನಹಳ್ಳಿ, ಬೆಂಗಳೂರು ಜಿಲ್ಲೆ.

'SIDDAGANGA' Monthly, Siddaganga mutt. KRN Q-9.
Registered with the Registrar of News papers for under India No. 17139/69



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.